# ವಿಶ್ವಧರ್ಮದ ದಶಲಕ್ಷಣಗಳು





ಪ್ರೊ. ಏಜಾಸುದ್ದಿನ್ ಫೈರೋಜ್, ಎಂ.ಎ.,





ಪ್ರಕಾಶಕರು :
ಶ್ರೀ ಚಕ್ರೇಶ್ವರಿ ಜೈನ್ ಮಹಿಳಾ ಸಮಾಜ
ಬೆಂಗಳೂರು

# ಮುನ್ನುಡಿ

**"ವಿಶ್ವಧರ್ಮದ ದಶಲಕ್ಷಣಗಳು"** 'ರಇಧೂ' ಕವಿಯಿಂದ ರಚಿಸಲ್ಪಟ್ಟ ಹತ್ತು ಪ್ರಾಕೃತ ಪದ್ಯಗಳ ಸಣ್ಣಗ್ರಂಥ. 1971 ರಲ್ಲಿ ಶ್ರೀ ಜಿ. ಬ್ರಹ್ಮಪ್ಪನವರೊಡನೆ ನಾನು ಇಂದೋರಿಗೆ ಹೋಗಿದ್ದಾಗ ಸಾಧು ಜಗತ್ತಿನ ಮುಕುಟಮಣಿಗಳಾದ ಮುನಿಶ್ರೀ ವಿದ್ಯಾನಂದ್ ಜೀ ಅವರ ಹತ್ತಿರ ಈ ಗ್ರಂಥ ಸಿಕ್ಕಿತು.

ವಿಶ್ವಧರ್ಮದ ಉದಾತ್ತ ಲಕ್ಷಣಗಳನ್ನು ಕವಿ ಕೇವಲ ಹತ್ತು ಶ್ಲೋಕಗಳಲ್ಲಿ ಬರೆದು ಬಿಂದುವಿನಲ್ಲಿ ಸಿಂಧು ತುಂಬುವ ಕಾರ್ಯ ಮಾಡಿದ್ದಾನೆ. ಇದರ ವಿದ್ವತ್ಪೂರ್ಣ ವ್ಯಾಖ್ಯೆ ಹಿಂದಿ ಭಾಷೆಯಲ್ಲಿ ಮುನಿಶ್ರೀಗಳು ಬರೆಯುತ್ತಿದ್ದರು. ಅವರ ಚರಣ ಕಮಲಗಳಲ್ಲಿ. ಕುಳಿತು ಕನ್ನಡದಲ್ಲಿ ಇದರ ಅನುವಾದ ಮಾಡಿದೆ. ಮುನಿಶ್ರೀಗಳು ಆನಂದಪಟ್ಟು ಇದು ಆದಷ್ಟುಬೇಗ ಕನ್ನಡ ಬಾಂಧವರ ಕೈಸೇರಲಿ ಎಂದು ಆಶೀರ್ವದಿಸಿದರು. ಮುನಿಶ್ರೀಗಳಿಗೆ ನನ್ನ ಸಾಷ್ಟಾಂಗ ಜೈ ಜಿನೇಂದ್ರಗಳು.

ಶ್ರೀ ಎಂ.ಸಿ. ಅನಂತರಾಜಯ್ಯನವರು ಸಂತೋಷದಿಂದ ಇದನ್ನು ಪ್ರಕಟಣೆಗೆ ತರಲು ಒಪ್ಪಿಕೊಂಡರು. ನನ್ನ ಸಹೋದ್ಯೋಗಿಗಳಾದ ಶ್ರೀ ಜೀ. ಅಶ್ವತ್ಥನಾರಾಯಣ ಎಂ.ಎ., ಅವರು ಹಸ್ತ ಪ್ರತಿಯನ್ನು ತಿದ್ದಿಕೊಟ್ಟರು. ಓಂಕಾರ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಕೆ.ಆರ್.ಡಿ. ಗೌಡ ಅವರು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸರ್ವಧರ್ಮ ಸಮನ್ವಯ ಹಾಗೂ ಭಾವಾತ್ಮಕ ಏಕತೆಯನ್ನು ಗುರಿಯಾಗಿಟ್ಟುಕೊಂಡು ಈ ಕಾರ್ಯ ಮಾಡುತ್ತಿದ್ದೇನೆ. ಈ ಉದ್ದೇಶವನ್ನು ವಾಚಕರು ಸಾರ್ಥಕ ಪಡಿಸಿದರೆ ನನ್ನ ಕಿಂಚತ್ ಪ್ರಯತ್ನ ಫಲಪ್ರದವಾಗುವುದೆಂದು ನಂಬಿದ್ದೇನೆ.

**ಏಜಾಸುದ್ದೀನ್ ಎಂ.ಎ.,**
ಅಧ್ಯಕ್ಷರು, ಹಿಂದಿ ವಿಭಾಗ
ಸರ್ಕಾರಿ ವಿಜ್ಞಾನ ಕಾಲೇಜು

ಬೆಂಗಳೂರ-೧.
ತಾ॥ 1-9-1974

## ಎರಡು ಮಾತು

ಮುನಿ ಶ್ರೀ ವಿದ್ಯಾನಂದ ಜೀ ಅವರ ಗ್ರಂಥ "ವಿಶ್ವಧರ್ಮದ ದಶ ಲಕ್ಷಣಗಳು" ಒಂದು ಸ್ತುತ್ಯ ಪ್ರಯತ್ನವಾಗಿದೆ. ಮುನಿಶ್ರೀಗಳು ಆಧುನಿಕ ಪ್ರಾಚ್ಯ ಮತ್ತು ಪ್ರಾಚೀನ, ಎಲ್ಲಾ ರೀತಿಯ ಸಾಹಿತ್ಯ, ಸಾಂಸ್ಕೃತಿಕ, ಮತ್ತು ದಾರ್ಶನಿಕ ಜ್ಞಾನವನ್ನು ಅರಗಿಸಿಕೊಂಡಿದ್ದಾರೆ. ಅವರು ಆಚರಣ ದಲ್ಲಿ ಜೀವಿತ ರೂಪಿಗಳು. ಜ್ಞಾನ ಮತ್ತು ಚಾರಿತ್ರ್ಯದ ಪಾವನ ಅನುಭೂತಿ ಯನ್ನು ತುಂಬಾ ಸರಳ, ಸರಸ, ಮಾರ್ಮಿಕ ಮತ್ತು ಹೃದಯಸ್ಪರ್ಶಿ ಶೈಲಿ ಯಲ್ಲಿ ವರ್ಣಿಸಿದ್ದಾರೆ. ಇದನ್ನು ಓದಿ ಹೃದಯ ಅರಳಿತು. ಜೈನ ತೀರ್ಥಂ ಕರರು ಮತ್ತು ಆಚಾರ್ಯರು ಸಮಸ್ತಜೀವಿಗಳ ಆತ್ಮ-ಉನ್ನತಿ, ಸುಖ ಮತ್ತು ಸಮೃದ್ಧಿಯ ಸಿದ್ಧಾಂತಗಳ ಪೋಷಣೆ ಮಾಡಿರುವವರು ಒಂದು ಪಕ್ಷ, ಇಂದಿನ ವಿಶ್ವ-ಮಾನವ ತನ್ನ ಸ್ವರೂಪ ಮತ್ತು ಕರ್ತವ್ಯವನ್ನು ಅರಿತು ಕೊಂಡು ನಡೆದರೆ ಸರಿಯಾದ ವ್ಯವಸ್ಥೆ ಮತ್ತು ಸಹಜ ಶಾಂತಿ ವಿಶ್ವದಲ್ಲಿ ಸಂಭವಿಸಬಹುದು. ಮುನಿ ಶ್ರೀ ಅವರು ಪ್ರಾಕೃತ ಭಾಷೆಯ ಮೂಲ ಶ್ಲೋಕ ಗಳ ಮೇಲೆ ಬರೆದಿರುವ ವಿವೇಚನೆಯಲ್ಲಿ ಪೂರ್ಣಭಾವದ ಜೊತೆಗೆ ಅಧಿಕ-ಅಸೀಮ-ಗಂಭೀರ ಅಧ್ಯಯನ ಮತ್ತು ವಿಶಾಲ ದೃಷ್ಟಿಕೋಣದ ದರ್ಶನವಾ ಗುತ್ತದೆ. ಮುನಿ ಶ್ರೀ ಅವರಿಂದ ರಚಿತವಾದ **"ಸ್ಯಾದ್ವಾದ ಮತ್ತು ಅನೇ ಕಾಂತ," "ಭರತ ಮತ್ತು ಭಾರತ," "ಸ್ವತಂತ್ರ ಮತ್ತು ಸಮಾಜವಾದ," ಮತ್ತು "ನಾರಿಯ ಸ್ಥಾನ ಮತ್ತು ಕರ್ತವ್ಯ"** ಪುಸ್ತಕಗಳನ್ನು ಓದುವ ಸೌಭಾಗ್ಯವು ನನಗೆ ದೊರಕಿದೆ. ಯುಗಕ್ಕೆ ಅನುಕೂಲವಾದ ಮತ್ತು ವಿಶ್ಲೇಷ ಣಾತ್ಮಕ-ವೈಜ್ಞಾನಿಕ ಶೈಲಿಯಲ್ಲಿ ವಿಚಾರಗಳನ್ನು ಆ ಗ್ರಂಥಗಳಲ್ಲಿ ಪ್ರತಿ ಪಾದಿಸಲಾಗಿದೆ. ಇಂತಹ ವಿಷಯ ಪ್ರತಿಪಾದನೆ ನನಗೆ ಬೇರೆಯ ಕಡೆ ದೊರಕ ಲಿಲ್ಲ. ಈ ಗ್ರಂಥ ಪ್ರಕಾಶನದಿಂದ ಒಂದು ಕಡೆ ಸಮಾಜ ಮತ್ತು ಧರ್ಮದ ಕಲ್ಯಾಣವಾಗಿದೆ ; ಮತ್ತೊಂದು ಕಡೆ ಆಧುನಿಕ ಲೇಖಕರ, ಪ್ರಕಾಶಕರ ಮತ್ತು

ವಿಚಾರಕರ ಮಾರ್ಗದರ್ಶನವಾಗಿದೆ. ಈ ಸುಂದರ ಪ್ರಕಾಶನಕ್ಕೆ ನನ್ನ ಅಭಿನಂದನೆಗಳು ಮತ್ತು ಮಂಗಳ ಸ್ವೀಕರಿಸಿ ಎಂದು ತಿಳಿಸುತ್ತೇನೆ.

ಮುನಿಜನಕ ವಿಜಯ

ಅರ್ಬುದ್ ಗಿರಿರಾಜ್ ತಪಾಗಚ್ಛ

ಉಪಾಶ್ರಯ ಪಿಪಿಲಿ ಬಾಜಾರು

# ಪ್ರಸ್ತಾವನೆ

"ಧರ್ಮೋ ವತ್ಥು ಸಹಾವೋ ಖಮಾದಿಭಾವೋಯ ದಸವಿಹೋಧಮ್ಮೋ।
ಚಾರಿತ್ತಂ ಖಲು ಧಮ್ಮೋ ಜೀವಾಣಂ ರಖ್ಖಣಜೋ ಮ್ಮೋ ॥

ಕಾರ್ತಿಕೇಯಾನು ಪ್ರೇಕ್ಷಾ-476

ಬಾಬು ಛೋಟೆ ಲಾಲ್ ಸ್ಮೃತಿ ಗ್ರಂಥದಲ್ಲಿ ಶ್ರೀ ಸತ್ಯದೇವ ವಿದ್ಯಾಲಂಕಾರರು ಜೈನ ಧರ್ಮವನ್ನು ರಾಷ್ಟ್ರಧರ್ಮದ ಪ್ರತೀಕವೆಂದೂ ಮತ್ತು ಪೂರ್ಣಧರ್ಮ ಸಾಮರ್ಥ್ಯ ಹೊಂದಿದೆ ಎಂದು ವರ್ಣನೆ ಮಾಡುತ್ತಾ ಈ ರೀತಿ ಬರೆದಿದ್ದಾರೆ.

'........ ಇಂದು ಸಮಾಜ, ಧರ್ಮದಿಂದ ನಿರಾಶೆ ಹೊಂದಿದೆ; ನಿರಪೇಕ್ಷಭಾವ ಪ್ರಬಲವಾಗುತ್ತಿದೆ; ಇಂತಹ ಸಮಯದಲ್ಲಿ ಜೈನ ಧರ್ಮದ ಅನುಯಾಯಿಗಳು ಅವರ ಧರ್ಮ ವಿಕಾಸೋನ್ಮುಖಿಯಾದುದರಿಂದ ಸದಾ ಕಾಲದಲ್ಲಿಯೂ ಪರಿವರ್ತನ ಶೀಲವಾಗಿದೆ ಎಂದು ತೋರಿಸಬೇಕು. ಜೈನಧರ್ಮ ಇದುವರೆಗೆ ಪ್ರತಿಯೊಂದು ಬೇಡಿಕೆಯನ್ನೂ ಪೂರೈಸಿದೆ. ಇಂದಿಗೂ ಅದರಲ್ಲಿ "ರಾಷ್ಟ್ರಧರ್ಮ"ದ ಆವಶ್ಯಕತೆಗಳನ್ನು ಪೂರೈಸುವ ಶಕ್ತಿ ಇದೆ. ಇದನ್ನು ಸ್ಪಷ್ಟಶಬ್ದಗಳಲ್ಲಿ ಹೇಳಿದರೆ ಅಧಿಕ ಉಪಯೋಗವಾಗುತ್ತದೆ.

'ಮಂಗಳ ಪ್ರಭಾತ'ದಲ್ಲಿ ಶ್ರೀ ಕಾಕಾ ಕಾಲೇಲ್ ಕರ್ ಅವರು ಜೈನಧರ್ಮ ಸಾರ್ವಭೌಮ ಮತ್ತು ಸಾರ್ವಕಾಲಿಕ ಎಂದು ಹೇಳುತ್ತಾ "ಸಾರ್ವಭೌಮ ಮತ್ತು ಸಾರ್ವಕಾಲಿಕ ಜೈನ ಧರ್ಮದ ಆವಶ್ಯಕತೆ ಇದೆ" ಎಂಬ ತಮ್ಮ ಲೇಖನದಲ್ಲಿ ಈ ರೀತಿ ಬರೆಯುತ್ತಾರೆ.

"ನಾನು ಸ್ವತಃ ಸನಾತನ ಹಿಂದೂ ಆಗಿ ಜೈನ ಸಮಾಜಕ್ಕೆ ಸಲಹೆ ನೀಡವಷ್ಟು ಶಕ್ತನಲ್ಲ. ಆದರೂ ಇಷ್ಟುಮಾತ್ರ ಹೇಳಬಲ್ಲೆ. .......ಜೈನ-ದೃಷ್ಟಿ, ಜೈನಸಂಸ್ಕೃತಿ, ಮತ್ತು ಜೈನ-ಧರ್ಮ ವಿಶಾಲವಾಗಿ ಇಡೀ ಜಗತ್ತಿನಲ್ಲಿ ಹರಡಲು ಯೋಗ್ಯವಾಗಿದೆ. ಇದು ಭಾರತದ ಸನಾತನ ಸಂಸ್ಕೃತಿಯ ರಾಥಿವಾಗಿ ಸಂಸ್ಥೆಯ ಸ್ವರೂಪನ್ನೊಳಗೊಂಡಿದೆ.

ಪ್ರ

'ಮತ್ತು ವ್ಯಾಪಕವಾದ ಸಾರ್ವಭೌಮ ಜೈನದೃಷ್ಟಿಯ ಪ್ರಚಾರ ಜಗತ್ತಿನಲ್ಲಿರುವ ಬೇರೆ ಬೇರೆ ದೇಶಗಳಲ್ಲಿ ತೀವ್ರವಾಗಿ ನಡೆಯಬೇಕು. ಮತ್ತು ಅಲ್ಲಿಯ ಜನತೆ ತಮ್ಮ ಸಂಸ್ಕೃತಿಗೆ ಅನುಕೂಲವಾಗುವ ಹಾಗೆ ಸಾರ್ವಭೌಮ-ವಾದ ಜೈನ ಧರ್ಮದ ''ಸ್ವದೇಶಿ ಆವೃತ್ತಿ''ಯನ್ನು ಸಿದ್ಧಪಡಿಸಕೊಳ್ಳಬೇಕು.

**(ಮಂಗಲ ಪ್ರಭಾತ, ರಾಜಘಾಟ್, ನವದೆಹಲಿ. 15/8/71)**

ಒಂದು ಸಾವಿರ ವರ್ಷಗಳ ಹಿಂದೆ ಆಚಾರ್ಯ ಅಮೃತಚಂದ್ರರು ದಾನ-ತಪ-ಜಿನಪೂಜೆ ಮುಂತಾದವುಗಳ ಮುಖೇನ ಜೈನಧರ್ಮದ ವಿಶ್ವರೂಪದ ಉಪದೇಶ ಕೊಟ್ಟಿದ್ದರು.

"ಆತ್ಮಾ ಪ್ರಭಾವನೀಯೋ ರತ್ನತ್ರಯ ತೇಜಸಾ ಸತತ ಮೇವ ।
ದಾನ ತಪೋ ಜಿನ ಪೂಜ ವಿದ್ಯಾತಿಶಯ್ಯೈಶ್ಚ ಜಿನಧರ್ಮ ॥

ಪುರುಷಾರ್ಥ ಸಿದ್ಧಪಾಯ-30

ಧರ್ಮವೆಂದರೇನು? ಇವಕ್ಕೆ ಉತ್ತರವನ್ನು ವ್ಯವಹಾರ ಮತ್ತು ನಿಶ್ಚಯ ಈ ಎರಡು ರೀತಿಯಲ್ಲಿ ಕೊಟ್ಟಿದೆ. ಜೈನ ದಾರ್ಶನಿಕರು **ವಸ್ತು ಸ್ವಭಾವೋ ಧರ್ಮ:** ಅಂದರೆ ವಸ್ತುವಿನ ಸ್ವಭಾವವೇ ಧರ್ಮ ಎಂದು ಕರೆಯುತ್ತಾರೆ. ಈ ಅರ್ಥದಿಂದ ನೋಡಿದರೆ ನೀರಿನಲ್ಲಿ ಹರಿಯುವ ಮತ್ತು ಶೀತವಾಗಿರುವ ಗುಣವಿರುತ್ತದೆ. ಅಗ್ನಿಯಲ್ಲಿ ಉರಿಯುವ ಮತ್ತು ಪ್ರಕಾಶ ನೀಡುವ ಗುಣವಿದೆ. ಆಕಾಶದಲ್ಲಿ ವ್ಯಾಪಕತೆ ಇದೆ. ಇವೆಲ್ಲಾ ಆಯಾ ವಸ್ತುಗಳ ಸ್ವಭಾವ. ಇದೇ ಅವುಗಳ ಧರ್ಮ. ಇದೇ ರೀತಿ ಮನುಷ್ಯನಲ್ಲಿ ಸಹಜವಾಗಿರುವುದು ಅವನ ಧರ್ಮವಾಗಿದೆ. ಧರ್ಮ ತತ್ವವನ್ನು ಸೂಕ್ಷ್ಮ-ಗ್ರಾಹಿಗಳು ಈ ರೀತಿ ಗ್ರಹಿಸಿದ್ದಾರೆ: **ಕ್ಷಮಾ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪ** ಮುಂತಾದ ರೂಪಗಳಲ್ಲಿ ಧರ್ಮ ಮನುಷ್ಯನಲ್ಲಿದೆ. ಅವರು ಇದನ್ನು ವಿಶ್ಲೇಷಿಸಿ ಇದೇ ಮಾನವನ ಸಹಜ ಧರ್ಮ ಎಂದು ತಿಳಿ-ಸಿದ್ದಾರೆ. ಕ್ಷಮಾದಿ ವೃತ್ತಿಗಳನ್ನು ಉಲ್ಲೇಖಿಸಿರುವ ಈ ಧರ್ಮ ಅಖಿಲ ಮಾನವ ಜಾತಿಯ ಧರ್ಮವಾಗಿದೆ. ವಿಶ್ವಧರ್ಮವಾಗಿದೆ. ಇದಕ್ಕೆ ಜೈನ ಧರ್ಮವೆಂದು ಕರೆಯುವುದರಲ್ಲಿರುವ ಅರ್ಥವೆಂದರೆ ಜಿನರಿಂದ ಪ್ರತಿಪಾದಿತ

ಪಾದ ಧರ್ಮವೇಡು. ಮನುಷ್ಯ ಕೃತಜ್ಞತೆಯನ್ನು ತೋರಿಸುವುದಕ್ಕೋಸ್ಕರ ಅವರನ್ನು ಸ್ಮರಿಸಿದ್ದಾನೆ. ಇದರಲ್ಲಿ ಯಾರಾದರೂ ಇದು ಕೇವಲ ಒಂದು ಜಾತಿಯವರ ಧರ್ಮವಾಗಿದೆ ಅವರಿಗೆ ಮಾತ್ರ ಲಾಭದಾಯಕವಾಗಿದೆ ಬೇರೆಯವರಿಗೆ ನಿಷೇಧಿಸಲ್ಪಟ್ಟಿದೆ ಎಂದು ಹೇಳುವುದು ಸರಿಯಲ್ಲ. ಆಚಾರ್ಯರು ಸಹ ಇದು ಇಡೀ ಮಾನವ ಜಗತ್ತಿಗೆ ಮೀಸಲಾದ ಧರ್ಮವಾಗಿದೆ ಎಂದು ಹೇಳುತ್ತಾ ಇದನ್ನು ಸಮೀಚಿನ ಧರ್ಮವೆಂದೂ ಕರೆದಿರುವರು. ವಿಶೇಷತೆ ಮತ್ತು ವಿಶಿಷ್ಟತೆಗಳೊಡನೆ ಇದು ಲೋಕದಲ್ಲಿದೆ. ಕೆಲವರು ಇದನ್ನು ಅನು-ಸರಿಸುತ್ತಾರೆ. ಕಾಲಕ್ರಮೇಣ ಸಮಾನ ಆಚಾರ ಮತ್ತು ವಿಚಾರಗಳು ಇವರಲ್ಲಿರುವುದರಿಂದ, ಇದೊಂದು ಸಮಾಜವಾಗಿ ಹೋಗುತ್ತದೆ. ಇಲ್ಲದೆ ಹೋದರೆ ಧರ್ಮದ ವಿಷಯದಲ್ಲಿ ಜಾತಿಯ ಮತ್ತು ರಾಷ್ಟ್ರದ ಎಲ್ಲೆಯನ್ನು ನಿರ್ಧರಿಸಲು ಸಾಧ್ಯವಿಲ್ಲ. ಅಗ್ನಿಯಲ್ಲಿರುವ ಜ್ವಲನಗುಣ ಉರಿಯುವಿಕೆ ಲೋಕಕ್ಕೆಲ್ಲ ಒಂದೆ. ಇದೇ ರೀತಿಯಲ್ಲಿ ಧರ್ಮವೂ ಎಲ್ಲರಿಗೂ ಸಮಾನ ಉಪಯೋಗಿಯಾಗಿದೆ.

ಧರ್ಮವನ್ನರಿಯಬೇಕಾದರೆ ಪುಸ್ತಕಗಳ ಅಭ್ಯಾಸದಿಂದ ಸಾಧ್ಯವಿಲ್ಲ. ಆಚಾರ, ನ್ಯಾಯ ಮತ್ತು ನೀತಿಯನ್ನು ಅನುಸರಿಸಿ ಅರಿಯಬೇಕಾಗುತ್ತದೆ. ಧರ್ಮ ಪುಸ್ತಕ ಜ್ಞಾನಕ್ಕೆ ಸೀಮಿತವಾಗಿ ಹೋದರೆ ಅದು ಲೋಕ ಜೀವನದಿಂದ ಬಾಹಿರವಾಗಿ ಹೋಗುತ್ತದೆ. ಧರ್ಮ ಜೀವಂತವಾಗಿರಬೇಕಾದರೆ ಅದು ಗ್ರಂಥಗಳಿಂದ ಹೊರಗೆ ಬರಬೇಕು. ಆಚರಣೆಯಲ್ಲಿ ಆಳವಡಬೇಕು ಧರ್ಮದ ವಿಜಯದಲ್ಲಿ ಮನುಷ್ಯನ ಸದ್-ವೃತ್ತಿಗಳ ವಿಜಯವಿದೆ. ಧರ್ಮ ಪರಾಜಯವಾದಲ್ಲಿ ಮಾನವನ ನೈತಿಕಸ್ಥರ ಕೆಳಮಟ್ಟಕ್ಕಿಳಿದು ಹೋಗುತ್ತದೆ. ಧರ್ಮ ಉತ್ಥಾನಕ್ಕೇರಿದರೆ ಮನುಷ್ಯನೂ ಉತ್ಥಾನ ಹೊಂದಿದ ಹಾಗೆ; ಭಾವಿ ತೋಡುವವನು ಹೆಜ್ಜೆ ಹೆಜ್ಜೆಗೂ ಕೆಳಗಿಳಿಯುತ್ತಾನೆ. ಮನೆಕಟ್ಟುವವನು ಪ್ರತಿ ಇಟ್ಟಿಗೆಯೊಡನೆ ಮೇಲೆ ಮೇಲೆ ಹೋಗುತ್ತಾನೆ. ಧರ್ಮ-ಒಂದು ಮಂದಿರದ ನಿರ್ಮಾಣವಿದ್ದ ಹಾಗೆ; ಇದನ್ನು ಅನುಸರಿಸುವವನು ಪ್ರತಿ ಕ್ಷಣಕ್ಕೂ ಮೇಲೆ ಮೇಲೆ ಹೋಗುತ್ತಿರುತ್ತಾನೆ. ತೀರ್ಥಂಕರರು ಧರ್ಮವು ಸರ್ವ ಜಗತ್ತಿಗೆ ಹಿತ ಬಯಸುತ್ತದೆ ಎಂದು ಹೇಳಿದ್ದಾರೆ. ಇದು ವಿಶ್ವಕ್ಕೆ ಉಪಕಾರಿ ಆಗಿದೆ. ಇದರ ಸಂಬಂಧ ಜಾತಿ ಅಥವಾ ವ್ಯಕ್ತಿಯವರಿಗೆ ಸೀಮಿತ

ವಾಗಿಲ್ಲ, ಅವರ ಧರ್ಮ ಸರ್ವಜನೀನ ಅಥವಾ ವಿಶ್ವಧರ್ಮವಾಗಿದೆ. ನಾವು ಈ ಧರ್ಮಕ್ಕೆ ಜಯವಾಗಲಿ ಎನ್ನಬೇಕು.

"ಸವ್ವ ಜಗಸ್ಯ ಹಿದಕರೋ ಧಮ್ಮೋ ತಿತ್ಥಂಕರೆ ಹಿ ಅಕ್ಖಾದೋ" ।

ಮೂಲಚಾರ-60

ವಿಶ್ವ ಧರ್ಮದ ದಶಾಂಗಗಳ ಮೇಲೆ ಕವಿ "ರಇಧೂ" ಅವರ ಅಪಭ್ರಂಶ ವ್ಯಾಖ್ಯೆ ತುಂಬಾ ಪ್ರಸಿದ್ಧವಾಗಿದೆ. ಪ್ರಸ್ತುತ ವ್ಯಾಖ್ಯೆ ಮತ್ತು ಮೂಲ ನಮಗೆ ದೆಹಲಿಯ ಪನ್ನಾಲಾಲ್ ಜೀ ಅಗ್ರವಾವೆ, ಅವರ ಸೌಜನ್ಯದಿಂದ ದೊರಕಿತು. ಪನ್ನಾಲಾಲ್ ಅವರು ಸಾಹಿತ್ಯ ಮತ್ತು ಮುನಿಗಳ ಭಕ್ತರಾಗಿದ್ದಾರೆ. ಈ ಗ್ರಂಥ ಪ್ರಕಾಶನದಿಂದ ಪಾಠಕರಿಗೆ ವಿಶೇಷ ಲಾಭವಾಗಬಹುದೆಂದು ನಾವು ನಂಬಿದ್ದೇವೆ.

ಇತಿಶಮ್

## ಆಮುಖ

### "ಕ್ಷಮಾ"

ಕ್ಷಮಾಪಣೆಗೆ ಪರ್ವರೂಪ ಕೊಡುವುದು ಆಧ್ಯಾತ್ಮಿಕ ನಿರ್ಮಲತೆಯ ವಿಕಾಸವಾಗಿದೆ. ಕ್ಷಮಿಸಿದವನು ಸುಖವಾಗಿ ಮಲಗುತ್ತಾನೆ. ಕ್ಷಮಿಸಲಾರದೆ ಹೊದವನು ತನ್ನ ರಾತ್ರಿಯನ್ನು ದುರ್ಭರವಾಗಿ ಕಳೆಯುತ್ತಾನೆ. ಶರ ಮಂಚದಮೇಲೆ ಪವಡಿಸಿದ ಹಾಗೆ ಅವನಿಗೆ ಭಾಸವಾಗುತ್ತದೆ.

ಕ್ಷಮೆ ಕೇವಲ ವಾಣಿಯ ವಿಷಯವಲ್ಲ. ಅದು ಅಂತಃಕರಣದ ನಿಧಿ ಯಾಗಿದೆ. ಸಕ್ಕರೆಯ ಸಿಹಿ ನಾಲಿಗೆಯವರೆಗೆ ಮಾತ್ರ ಸೀಮಿತವಾಗಿರುತ್ತದೆ. ಆದರೆ ಕ್ಷಮೆಯ ಮಾಧುರ್ಯ ಅಂತಃಕರಣವನ್ನು ಮುಟ್ಟುತ್ತದೆ. ಕ್ಷಮೆ ಶಾಂತಿಯನ್ನು ನೀಡುತ್ತದೆ.

"ಅತೃಣೇ ಪತಿತೋ ವನಿಃ ಸ್ವಯ ಮೇವೋ ಪಶಾಮ್ಯತಿ ।
ಶಾಂತಿ ಖಜಕರೇ ಯಸ್ಯ ಕಿಂ ಕರಿಷ್ಯತಿ ದುರ್ಜನಃ" ॥

ಎಲ್ಲಿ ಹುಲ್ಲುಕಡ್ಡಿಯೂ ಇರುವುದಿಲ್ಲವೋ ಅಲ್ಲಿ ಮೇಲಿಂದ ಬಿದ್ದ ಬೆಂಕಿಯು ಹಾರಿ ಹೋಗುತ್ತದೆ. ಯಾರು ಶಾಂತವಾಗಿರುತ್ತಾನೊ ಅವನಿಗೆ ದುಷ್ಟರು ಏನೂ ಮಾಡಲು ಸಾಧ್ಯವಿಲ್ಲ.
ಭಗವಾನ್ ಮಹಾವೀರರು ತಿಳಿಸಿದ್ದಾರೆ.

"ಖಮ್ಮಾಣಿ ಸವ್ವ ಜೀವಾಣಂ ಸವ್ವೇ ಜೀವಾ ಖಮಂತು ಮೇ ।
ಮೈತೀ ಮೇ ಸವ್ವ ಭೂತೇಷು ವೈರಂ ಮಜ್ಝಂ ನ ಕೇನವಿ" ॥

ನಮ್ಮ ನಯನಗಳ ಅಂತರ್ ಸೌಂದರ್ಯ ಕಾಡಿಗೆ ಯಿಂದ ಹೆಚ್ಚುವುದಿಲ್ಲ ದೃಷ್ಟಿಯಲ್ಲಿ ಮಿತ್ರತ್ವದ ಅಂಜನ ಹಾಕುವುದರಿಂದ ಹೆಚ್ಚುತ್ತದೆ. **'ಸರ್ವಾ ಆಶಾಮಯ ಮಿತ್ರಂ ಭವಂತು"** ವೈದಿಕ ಮಹರ್ಷಿಗಳು ಹೇಳಿದ್ದಾರೆ. "ಎಲ್ಲೆಲ್ಲೂ ನಮಗೆ ಮಿತ್ರತೆಯ ಪ್ರಾಪ್ತಿಯಾಗಲಿ." ಎಂದು. ನನ್ನ ಭಾವನೆ ಯಲ್ಲಿಯೂ ಇಂತಹುದೇ ಒಂದು ಪಂಕ್ತಿ ಇದೆ. "ಜಗತ್ತಿನ ಎಲ್ಲಾ ಜೀವಿ

ಗಳೊಡನೆ ನನ್ನ ನಿತ್ಯ ಮೈತ್ರಿ ಇರಲಿ." ವಾಸ್ತವಿಕತೆಯಲ್ಲಿ ಸ್ನೇಹ ಕ್ಷಮೆಯ ಪರಿಣಾಮವೇ ಆಗಿರುತ್ತದೆ. ಕೃತಜ್ಞತೆ, ವಿನಯ, ಮೈತ್ರಿ ಮುಂತಾದ ಸದ್ವೃತ್ತಿಗಳ ಮೂಲದಲ್ಲಿ ಕ್ಷಮೆಯ ಅಮೃತವಿರುತ್ತದೆ.

ಕ್ಷಮೆಯಿಂದ ಅಹಿಂಸೆಗೆ ನವ ಜೀವನ ದೊರಕುತ್ತದೆ. ಅಹಿಂಸೆಯು ನಾಮಾಂತರವೇ ಕ್ಷಮೆಯಾಗಿರುತ್ತದೆ. ಕ್ಷಮೆ ಶಬ್ದದಲ್ಲಿ ಕ್ಷ ಅಕ್ಷರ ಬರುತ್ತದೆ. ಇದರಲ್ಲಿ ಗಂಟುಬಿದ್ದಿದೆ. ಸಂಸ್ಕೃತದಲ್ಲಿ "ಮಾ" ಶಬ್ಧದ ಅರ್ಥ ನಿಷೇಧವೆಂದು. ಮನಸ್ಸು ಎಂದೂ ಗಂಟಾಗಬಾರದು ಎಂದು "ಕ್ಷಮೆ" ಶಬ್ದ ನಮಗೆ ಸಂದೇಶ ಕೊಡುತ್ತಿದೆ.

ಕ್ಷಮೆಯ ತಾತ್ಪರ್ಯ ದುರ್ಬಲತೆಯಲ್ಲ, ವೀರತೆ. ದುರ್ಬಲ ವ್ಯಕ್ತಿಯಲ್ಲಿರುವ ಸಹಿಷ್ಣುತೆಗೆ ಅಂಜುಬುರುಕುತನ ಎನ್ನುವರು. ಅದೇ ಸಬಲ ವ್ಯಕ್ತಿಯ ಸಹನೆಗೆ ಕ್ಷಮೆ ಎನ್ನುವರು. ಆದ್ದರಿಂದಲೇ "ಕ್ಷಮಾ ವೀರಸ್ಯ ಭೂಷಣ" ಆಗಿದೆ. ವ್ಯವಹಾರದಲ್ಲಿ ಬರದೆ ಹೋದ ಕ್ಷಮೆ "ಬಟ್ಟೆಯಲ್ಲಿ ಸುತ್ತಿರುವ ಹಣ ವಿದ್ದಹಾಗೇ."

ಕ್ಷಮೆ ಜೀವನವಾಗಿದೆ. ಜೀವನದ ನಿರ್ದೋಷ ಪ್ರತಿಕ್ರಿಯೆ ಯಾಗಿದೆ. ದೊಡ್ಡದೊಡ್ಡ ನಗರಗಳಲ್ಲಿರುವ ಎಡಗಡೆ ನಡೆಯುವ ನಿಯಮ. ಕೆಂಪು ದೀಪಗಳು ಜನರನ್ನು ನಿಲ್ಲಿಸಿ ಮುಂದೆ ಬಿಡುವ ನಿಯಮ-ಒಂದನೊಂದು ಕ್ಷಮಿಸಿ ಮುಂದೆ ನಡೆಯುತ್ತವೆ. ಕ್ಷಮೆ ನಮ್ಮನ್ನು ದುರ್ಘಟನೆಯಿಂದ ಕಾಪಾಡುತ್ತದೆ. ಅದು ಎಲ್ಲರಿಗೂ ಮಾರ್ಗ ತೋರಿಸುತ್ತದೆ.

ಕ್ಷಮೆ ಇಲ್ಲದೆ ಹೋದರೆ ದೊಡ್ಡ ಮೀನು ಚಿಕ್ಕ ಮೀನನ್ನು ನುಂಗಿ ಹಾಕುತ್ತದೆ. ಮಾನವನ ಸಮಾಜದಲ್ಲಿ ದೊಡ್ಡ ಮತ್ತು ಚಿಕ್ಕ ಮನುಷ್ಯರು ಜೊತೆಜೊತೆಯಾಗಿ ಬಾಳುತ್ತಿದ್ದರೆ ಇದಕ್ಕೆ ಕಾರಣ ಕ್ಷಮಾಗುಣವೇ ಆಗಿದೆ.

ದೊಡ್ಡ ದೊಡ್ಡ ಕಾರ್ಯಕ್ರಮಗಳನ್ನು ಏರ್ಪಡಿಸಿ ಕ್ಷಮಾಗುಣವನ್ನು ಧ್ವನಿವರ್ಧಕ ಯಂತ್ರದ ಮೇಲೆ ಚೆಲ್ಲಬೇಡಿ, ಅದನ್ನು ತಮ್ಮ ಪ್ರಾಣದ ಸಂಗಾತಿಯನ್ನಾಗಿಟ್ಟುಕೊಂಡು ಕಾರ್ಯ ರೂಪದಲ್ಲಿ ತನ್ನಿ. ಯಾವುದನ್ನು

ನೀವು ಕತ್ತಿಯಿಂದ ಕತ್ತರಿಸಲು ಸಾಧ್ಯವಿಲ್ಲವೊ ಅದನ್ನು ಕ್ಷಮಾಗುಣವೆಂಬ ಅಸ್ತ್ರದಿಂದ ಗೆದ್ದು ಆನಂದವಾಗಿರಬಹುದು.

ಕತ್ತಿ ಶತ್ರುತ್ವದ ಸೂಚನೆಯಾಗಿದೆ. ಹಿಂಸೆಯ ಉಪಕರಣವಾಗಿದೆ. ಆದರೆ ಕ್ಷಮೆ ಮಿತ್ರತೆಯ ಮಂಗಳ ಧ್ವನಿ. ಇದು ಅಹಿಂಸೆಯ ಘಟಕವಾಗಿದೆ. ಕತ್ತಿ ಒಂದನ್ನು ಎರಡು ಮಾಡುತ್ತದೆ. ಕ್ಷಮೆ ಎರಡನ್ನು ಒಂದಾಗಿ ಮಾಡುತ್ತದೆ. ಆಧ್ಯಾತ್ಮ ಶಸ್ತ್ರ ಯಾವಾಗಲು ಇಂತಹುದೇ ಆಗಿರುತ್ತದೆ.

**ಕ್ಷಮೆ ಉನ್ನತ ಮನೋಬಲ ಕೊಡುತ್ತದೆ.** ವ್ರತಿಗಳ ಆತ್ಮ ಈ ರತ್ನವನ್ನು ಧರಿಸಿದೆ. ಕ್ಷಮೆಯಿಂದ ಸಮತಾ ಭಾವದ ವೃದ್ಧಿಯಾಗತ್ತದೆ. ಕ್ಷಮಾ ರಹಿತ ಹೃದಯದಲ್ಲಿ ವೈರದ ರೇಖೆಗಳು ಬೆಟ್ಟದ ಮೇಲೆ ಕೆತ್ತಿದ ರೇಖೆಗಳ ಹಾಗಿರುತ್ತವೆ. ಆದರೆ ಕ್ಷಮೆ ವೈರದ ರೇಖೆಗಳನ್ನು ನೀರಿನ ಮೇಲೂ ಬಿಡುವುದಿಲ್ಲ. **"ಕ್ಷಮೆ ವಿನಯ ಧರ್ಮವಾಗಿದೆ. ಅದು ಸಾಮಾಜಿಕ ಶಿಷ್ಟತೆಯ ಅಲಂಕಾರವಾಗಿದೆ,"** ಕ್ಷಮೆ ಪಾಪರಹಿತವಾದ ಪಾವನವಾಗಿದೆ. ಕ್ಷಮೆ ಶಾಂತಿ ವನವಿದ್ದ ಹಾಗೆ, ಅಲ್ಲಿ 'ನಿರಾಕುಲತೆ' ತಪಸ್ಸು ಮಾಡುತ್ತದೆ.

ಕ್ಷಮೆಯಿಂದ ಅಹಿಂಸೆ ಮತ್ತು ಅಹಿಂಸೆಯಿಂದ ಕ್ಷಮೆಯನ್ನು ಪಾಲಿಸುವುದನ್ನು ಕಲಿಯಬೇಕು. **"ಪರಸ್ಪರೋಪಗ್ರಹೊ ಜೀವಾನಾಮ್"** ಈ ಸೂತ್ರ ಮತ್ಸ್ಯ-ನ್ಯಾಯದ ವಿರೋಧ ಮಾಡುವ ಅಹಿಂಸಾವಾದಿ ಮಾತ್ರ ಬರೆಯಬಲ್ಲ. "ತಾನು ಬಾಳಿ, ಬೇರೆಯುವರನ್ನು ಬಾಳಲು ಕೊಡುವುದು". ಎಷ್ಟು ಅಹಿಂಸಾಪರವಾಗಿದೆಯೋ ಅಷ್ಟೆ ಕ್ಷಮಾಮಯವೂ ಆಗಿದೆ. ಕ್ಷಮೆ ಸ್ವತಃ 'ನಿರಾಕುಲತೆ' ಯಲ್ಲಿದ್ದು ಬೇರೆಯುವರ ಅಭಿವೃದ್ಧಿಯನ್ನು ಅಪೇಕ್ಷಿಸುತ್ತದೆ.

ವಿಶ್ವಧರ್ಮದ ದಶಲಕ್ಷಣಗಳ ಆರಂಭ "ಉತ್ತಮ ಕ್ಷಮಾ ಧರ್ಮ ದಿಂದಾಗುತ್ತದೆ. ಮತ್ತು ಕ್ಷಮಾಪಣೆಯ ಪರ್ವವಾದಮೇಲೆ ಇದು ಪೂರ್ತಿ ಗೊಳ್ಳುತ್ತದೆ. ಇದನ್ನು ನೋಡಿದರೆ ಧರ್ಮರಹಸ್ಯದ ಆದಿ ಮತ್ತು ಅಂತ್ಯದಲ್ಲಿ 'ಕ್ಷಮೆ" ಯ ಸ್ವಾಸ್ತಿಕ ಬರೆದ ಹಾಗಿದೆ.

"ಕ್ಷಮೆಯನ್ನು ವಿಚಾರದಲ್ಲಿಡುವುದಕ್ಕಿಂತ ಆಚಾರದಲ್ಲಿ ತರುವುದು ಮೇಲು"! ನೀರಿರುವುದು ಕುಡಿಯುವುದಕ್ಕೆ, ಗಡಿಗೆಯನ್ನು ತುಂಬುವುದಕ್ಕಲ್ಲ ಅದರ ಶೀತಲತೆ ಕಂಠಕ್ಕೆ ಅಗತ್ಯ. ಜಲಾಶಯಕ್ಕೆ ಬೇಕಿಲ್ಲ. ಕ್ಷಮೆಯ ಪಾಠ ವನ್ನು ಬಹಳವಾಗಿ ಓದಿದ್ದೇವೆ. ಈಗ ಅದನ್ನು ಕಾರ್ಯಾಚರಣೆಗೆ ತರೋಣ. ಈ ರೀತಿ ಮಾಡಿದರೆ **"ನ್ಯಾಯಾಲಯದಲ್ಲಿ ತುಂಬಿರುವ ಜನರ ಗುಂಪು ಕಡಿಮೆ ಯಾಗುತ್ತದೆ." ಮತ್ತು ದೇಶಗಳ ಗಡಿಪ್ರದೇಶಗಳಲ್ಲಿರುವ ಶಸ್ತ್ರ ಪಂಕ್ತಿಗಳ ಸ್ಥಾನ ಮಿತ್ರ-ಗೋಷ್ಠಿಗಳಾಗಿ ಪರಿವರ್ತಿಸುತ್ತದೆ.**

ಸನ್ಮತಿಉಳ್ಳವರು ಮಾತ್ರ ಕ್ಷಮೆಯ ಸಂದೇಶವನ್ನು ಕೊಡಬಲ್ಲರು. ದುರ್ಮತಿಗಳಿಗೆ ಈ ಮಾತಿನ ಅರ್ಥವೇ ಗೋಚರಿಸುವುದಿಲ್ಲ. ಕ್ಷಮೆಉಳ್ಳ-ವನು ನಿತ್ಯ ನಂದನವನದಲ್ಲಿರುತ್ತಾನೆ. ಮತ್ತು ಕ್ಷಮೆಇಲ್ಲದವನು ಶುಷ್ಕ ದಾವಾನಲದಲ್ಲಿ ಉರಿಯುತ್ತಾನೆ. ಕ್ಷಮೆ ಬಹಳ ದೊಡ್ಡ ಶಬ್ದ. ಇದು ಉನ್ನತವಾದ ಸಂಸ್ಕೃತಿಯ ಧರ್ಮಕೋಶದಲ್ಲಿರುವುದು ಸಾಧ್ಯ.

'ಮೈತ್ತಿ ಮೇ ಸವ್ವ ಭೂತೇಸು ವೈರಂ ಮಜ್ಝಂ ನಕೇನವಿ'

ಭಗವಾನ್ ಮಹಾವೀರರು ವಿಶ್ವ ಮೈತ್ರಿಗಾಗಿ ಕಲ್ಯಾಣ ಸೂತ್ರದ ರಚನೆ ಮಾಡಿದ್ದಾರೆ. 'ಸಂಪೂರ್ಣವಾಗಿ ಪ್ರಾಣಿ ಮಾತ್ರದಿಂದ ನನ್ನ ಮೈತ್ರಿ ಇದೆ' ಎಂದು ಅವರು ಹೇಳುತ್ತಾರೆ. ಮನುಷ್ಯ ಮನುಷ್ಯನೊಡನೆ ಸ್ನೇಹ-ದಿಂದಿರುವುದು ದೊಡ್ಡದಲ್ಲ. ಇದು ಸ್ವಭಾವದಿಂದ ಸಜಾತಿ ಪ್ರೇಮವಾ-ಯಿತು. ಪಶು ಪಕ್ಷಿ-ಮನುಷ್ಯರೊಡನೆಯೂ ದ್ವೇಷವಿಲ್ಲದ ಹಾಗೆ ಬಾಳಲು ಪ್ರಯತ್ನಿಸಬೇಕು. ವೈರವನ್ನು ಬೇರುಸಹಿತ ಕಿತ್ತರೆ ಮೈತ್ರಿಯ ಬಳ್ಳಿ ಹುಲುಸಾಗಿ ಬೆಳೆಯುತ್ತದೆ.

ನಮ್ಮ ರಾಷ್ಟ್ರಗಳೆಲ್ಲಾ ಒಂದು ದಿನ ''ವಿಶ್ವ-ಮೈತ್ರಿ ದಿನಾಚರಣೆ'' ಯನ್ನು ಆಚರಿಸುತ್ತಾರೆ. ಇದರ ಅರ್ಥ ಬೇರೆ ದಿನಗಳಲ್ಲಿ ನಾವು ಒಬ್ಬರನ್ನೊ-ಬ್ಬರು ದ್ವೇಷಿಸುತ್ತೇವೆ ಎಂದಲ್ಲ! ನನ್ನ ದೃಷ್ಟಿಯಲ್ಲಿ ಮೈತ್ರಿಯ ದಿನ ವನ್ನಾ-ಚರಿಸುವ ಬದಲು ವರ್ಷ ಮತ್ತು ಕಲ್ಪಗಳನ್ನಾಚರಿಸಬೇಕು. ಮೈತ್ರಿ

ಸ್ಥಾಯೀರೂಪದಲ್ಲಿ ಅಂತಃಕರಣದಲ್ಲಿದ್ದಾಗ ಮಾತ್ರ ಮನುಷ್ಯನಲ್ಲಿರುವ ವೈರ ದೂರವಾಗಲು ಸಾಧ್ಯ. ಯಾವಾಗಲೂ ಅಪೇಕ್ಷಿತವಾಗಿರುವ ಮಿತ್ರತೆ ಉಪ-ಚಾರದ ದಿನದವರೆಗೆ ಮಾತ್ರ ಸೀಮಿತ ವಾಗಿರಬಾರದು. ಇದನ್ನು ಸೀಮಿತ ಗೊಳಿಸಿದರೆ ನಮ್ಮ ಆನಂದದ ಎಲ್ಲೆ ಸೀಮಿತವಾಗಿ ಹೋಗುತ್ತದೆ.

ಸ್ನೇಹದಿಂದ ಸದ್ಭಾವನೆಯು ವೃದ್ಧಿಯಾಗುತ್ತದೆ. ಒಬ್ಬ ಮಿತ್ರ-ಮತ್ತೊಬ್ಬ ಮಿತ್ರನ ಸುಖಗಳ ಸಂವರ್ಧಕ ಮತ್ತು ದುಃಖಗಳ ನಿವಾರಕವಾ-ಗಿರುತ್ತಾನೆ. ಇಂದಿನ ವಿಶ್ವವು, ಅವಿಶ್ವಾಸ, ಅಸತ್ಯತೆ, ದ್ವೇಷ ಮುಂತಾದ ವುಗಳಿಂದ ಆಕ್ರಾಂತವಾಗಿದೆ. ಇಂದು ಪ್ರತಿಫಳಿಗೆಯು ವಿಶ್ವ-ಮೈತ್ರಿಯ ಮಂತ್ರ ಪಾಠ ಮಾಡಬೇಕಾಗಿದೆ.

ಇಂದು ಚಂದ್ರಲೋಕಕ್ಕೆ ಹೋಗುವ ದುಷ್ಕರ ಪ್ರಯತ್ನ ಮನುಷ್ಯರು ಮಾಡುತ್ತಿದ್ದಾರೆ. ಆದರೆ ತಮ್ಮ ನೆರೆಯವನ ಹೃದಯವನ್ನು ಪ್ರವೇಶಿಸುವಷ್ಟು ತಾಳ್ಮೆ ಇವರಲ್ಲಿಲ್ಲ. ಅವರ ಜೀವನಕ್ಕೆ, ಮನೆ, ವಾಹನ, ರೇಡಿಯೋ, ಟೆಲಿವಿಜನ್, ಐಶ್ವರ್ಯ ಮುಂತಾದವುಗಳ ಆವಶ್ಯಕತೆ ಇದೆ. ಆದರೆ ಒಬ್ಬ ನಿಜವಾದ ಮಿತ್ರನನ್ನು ಅವರು ಹುಡುಕಲು ಪ್ರಯತ್ನ ಪಡುತ್ತಿಲ್ಲ.

ಮಿತ್ರತೆಯಿಂದ ದುಃಖ ದೂರವಾಗುತ್ತದೆ. ಶಾಂತಿ ಹೆಚ್ಚುತ್ತದೆ. ಇಂದಿನ ಜನರು ಅನಾವಶ್ಯಕವಾಗಿ ಶಸ್ತ್ರಾಸ್ತ್ರಗಳ ಸಂಚಯದಲ್ಲಿ ತಮ್ಮ ಸಮಯವನ್ನು ಕಳೆಯುತ್ತಿದ್ದಾರೆ. **''ಜಗತ್ತು ಒಂದೇ ಆಕಾಶದ ಕೆಳಗೆ ಬದುಕ ಬೇಕಾದರೆ, ಅದು ಯುದ್ಧೋನ್ಮಾದ ಮತ್ತು ಕಲಹಭಾವವನ್ನು ತ್ಯಜಿಸಬೇಕಾ ಗುತ್ತದೆ,"** ವೈರದಿಂದ ವೈರ ಎಂದೂ ದೂರವಾಗುವುದಿಲ್ಲ.

**"ಭಾದ್ರಪದ ಮಾಸ"**

ಜೈನ-ಜಗತ್ತಿನಲ್ಲಿ ಭಾದ್ರಪದ ಮಾಸಕ್ಕೆ ತುಂಬಾ ಮಹತ್ವಪೂರ್ಣವಾದ ಸ್ಥಾನವಿದೆ. "ಈ ಮಾಸದಲ್ಲಿ ಪಾಪ ಮತ್ತು ಪುಣ್ಯದ ಪರ್ಯವೇಕ್ಷಣ (ಲೆಕ್ಕಾಚಾರ) ನಡೆಯುವುದು" ಎಂದು ಶ್ರಮಣ ಸಂಸ್ಕೃತಿಯ ಇತಿಹಾಸ

ದಲ್ಲಿ ಬರೆಯಲ್ಪಟ್ಟಿದೆ, **ಈ ಸಮಯ "ವರ್ಷಾಯೋಗ"**ದ ಸ್ಥಿತಿಯಾಗಿರುತ್ತದೆ. ಶ್ರಮಣರು, ಮತ್ತು ಶ್ರಾವಕರು, ಮುನಿಗಳು ಎಲ್ಲರೂ **ಈ ಕಾಲ**ದಲ್ಲಿ ಒಂದು ಕಡೆ ನಿಲ್ಲುತ್ತಾರೆ. ಶ್ರಾವಕರು ಎಂಟು ತಿಂಗಳು ದ್ರವ್ಯೋಪಾರ್ಜನೆ ಮಾಡಿ ಸಂತೋಷವಾಗಿ ನಾಲ್ಕು ತಿಂಗಳು ತಮ್ಮ ನಿವಾಸಗಳಲ್ಲಿರುತ್ತಾರೆ. ಅವರು ಸೂಕ್ಷ್ಮ ಪ್ರಾಣಿಹಿಂಸೆಯಿಂದ ದೂರವಾಗಿರಬಹುದು. ಶ್ರಮಣಾದಿ ಸಂಘಗಳು 'ಚಾತುರ್ಮಾಸ'ದಲ್ಲಿ ವಿಹಾರ ಮಾಡುವುದಿಲ್ಲ. ಈ ಸಮಯದಲ್ಲಿ ಗೃಹಸ್ಥರು ಮತ್ತು ತ್ಯಾಗಿಗಳು ಪರಸ್ಪರ ಸಂಧಿಸಿ ಧರ್ಮಲಾಭವನ್ನು ಪಡೆಯಬಹುದು ಈ ಮಾಸದಲ್ಲಿ **ಷೋಡಶಕರಣವ್ರತ, ದಶಲಕ್ಷಣ ವ್ರತ, ಅನಂತ ಚತುರ್ದಶಿ ವ್ರತ,** ಮುಂತಾದ ವ್ರತ ಮತ್ತು ಉತ್ಸವಗಳು ಬರುತ್ತವೆ. ಜನ್ಮ ಕುಂಡಲಿಯಲ್ಲಿ 'ಏಕಾವಲೀ' ಯೋಗ ಕುಳಿತಿರುವಹಾಗೆ ಈ ಮಾಸ ಬರುತ್ತದೆ. ಇದರಲ್ಲಿ ಪವಿತ್ರಪರ್ವಗಳೆಲ್ಲಾ ಬಂದುಬಿಡುತ್ತವೆ. ವ್ರತಗಳ ಈ ವಾರ್ಷಿಕ ಸ್ಮರಣೆ ನಮಗೆ ಪುನರ್ನಿರೀಕ್ಷಣೆಯ ಅವಸರವನ್ನು ದಯಪಾಲಿಸುತ್ತದೆ. ಒಬ್ಬ ವ್ಯಕ್ತಿಯ ಸ್ಮರಣೆ ಅವನ ಹೆಸರಿನಿಂದ ಮಾಡುತ್ತೇವೆ. ಅದೇ ರೀತಿ ಭಾದ್ರಪದ ಮಾಸದ ಹೆಸರು ಕೇಳುತ್ತಲೇ ಧರ್ಮಗಳು ಜ್ಞಾಪಕಕ್ಕೆ ಬರುತ್ತವೆ. ಭದ್ರ ಪರಿಣಾಮವನ್ನು ಕೊಡುವ ವ್ರತಗಳ ತಿಂಗಳಿಗೆ ಭಾದ್ರಪದವೆಂದು ಹೆಸರು. 'ಭದ್ರ' ಶಬ್ದದ ಅರ್ಥ-ಕಲ್ಯಾಣ-ಕುಶಲ-ಕ್ಷೇಮ ಇತ್ಯಾದಿಯಾಗಿದೆ. ಈ ಪರ್ವ ಜಗತ್ತಿಗೆ ವ್ರತ-ನಿಯಮ-ನಿಷ್ಠೆಯ ಸ್ಮರಣೆ ಮಾಡಿಸಿ ಮಾನವ ಜನಾಂಗಕ್ಕೆ ಕಲ್ಯಾಣಕಾರಿಯಾಗಿದೆ. ಜೀವನದ ಪ್ರತಿ ಕ್ಷಣದಲ್ಲಿ ಮಾಡಲಾಗುವ ಜ್ಞಾತ, ಅಜ್ಞಾತ ಅಪರಾಧಗಳ ಅವಲೋಕನ ಮತ್ತು ಕ್ಷಮಾಪಣೆಯ ಉತ್ತಮ ಮಾಸ ಭಾದ್ರಪದ ಮಾಸವಾಗಿದೆ. ಇದರ ಸದುಪಯೋಗ ನಾವು ಮಾಡಿಕೊಳ್ಳಬೇಕು. ಭಾದ್ರಪದದ ಪ್ರಶಂಸೆ ಮಾಡುತ್ತಾ ಮಲ್ಲಿನಾಥ ಪುರಾಣದಲ್ಲಿ ಹೀಗೆ ಹೇಳಿದೆ ;

"ಅಹೋ ಭಾದ್ರಪದಾಖ್ಯೋಯಂ ಮಾಸೋಽನೇಕ ವ್ರತಾಕರಃ ।
ಧರ್ಮ ಹೇತು ಪರೋ ಮಧ್ಯೇಽನ್ಯ ಮಾಸಾನಾಂ ನರೇಂದ್ರವತ್" ॥

ಅನೇಕ ವ್ರತಗಳಿಂದ ಕೂಡಿದ ಈ ಭಾದ್ರಪದ ಮಾಸ ನಿಜಕ್ಕೂ ಧನ್ಯ ! ಇದು ಧರ್ಮದ ವೃದ್ಧಿ ಮಾಡುವ ತಿಂಗಳಾಗಿದೆ. ಬೇರೆಯ ತಿಂಗಳುಗಳಲ್ಲಿ

ಮಂತ್ರಿಗಳ ಮಧ್ಯೆ ರಾಜನ ಹಾಗೆ ರಾರಾಜಿಸುತ್ತಿದೆ. ಈ ಮಾಸ ಅನೇಕ ವ್ರತಗಳ ಆಕಾರ ಅಥವಾ ಆಗರವಾಗಿದೆ. ಇದರಲ್ಲಿ ಮೇಘಮಾಲೆ, ಚಂದನ ಷಷ್ಠಿ, ಲಬ್ಧಿ ವಿಧಾನ, ದಶಲಕ್ಷಣ ವ್ರತ, ಪುಷ್ಪಾಂಜಲಿವ್ರತ, ಮೇರುಸ್ಥಾಪನೆ, ಆಕಾಶಪಂಚಮಿ, ನಿರ್ದೋಷ ಸಪ್ತಮಿ, ಸುಗಂದ ದಶಮಿ, ಅನಂತ ಚತುರ್ದಶಿ, ಕಾಂಜಿಬಾರಸ, ಕರ್ಮನಿರ್ಜ , ರತ್ನತ್ರಯವ್ರತ, ಮುಂತಾದ ಆತ್ಮಶುದ್ಧಿಯ ಪುಣ್ಯಮಯ ಅವಕಾಶಗಳು ಏಕಕಾಲಕ್ಕೆ ಬರುತ್ತವೆ. ಧಾರ್ಮಿಕರಿಗೆ, ಕಾಯ, ವಾಚಾ, ಮನಸಾ ಪವಿತ್ರತೆಯನ್ನು ಕೊಡುತ್ತವೆ. ಈ ವ್ರತೋಪವಾಸ ಸಮೂಹಗಳ ಮುಖಾಂತರ ಭದ್ರ ಪರಿಣಾಮಗಳನ್ನು ದಯಪಾಲಿಸುವ ಈ ಮಾಸ ತನ್ನ ಹೆಸರನ್ನು ಸಾರ್ಥಕ ಪಡಿಸಿಕೊಂಡಿದೆ. ಈ ಮಾಸ ಬೇರೆ ತಿಂಗಳುಗಳ ಮಧ್ಯೆ ಚಕ್ರವರ್ತಿ ಇದ್ದ ಹಾಗೆ.

**ಪರ್ವತಿಥಿಗಳ ಆಧ್ಯಾತ್ಮಿಕ ರೂಪ : —**

ನಮ್ಮ ಆಧ್ಯಾತ್ಮಿಕ-ಸಂಸ್ಕೃತಿಯ ಪರಿಚಯವಿಲ್ಲದೆ, ಇಂದಿನ ನಮ್ಮ ಜೀವನ ಅಸ್ಥಿರತೆಯಲ್ಲಿ ಬಾಳುತ್ತಿದೆ. ಮನುಷ್ಯನ ಮನಸ್ಸು ಗೊತ್ತುಗುರಿ ಇಲ್ಲದೆ ಓಡಾಡುತ್ತಿದೆ. ಸ್ಥಿರತೆಯ ಅನ್ವೇಷಣೆಯಲ್ಲಿ ತೊಡಗಿದೆ. ಆತ್ಮ ವಿಜ್ಞಾನ ಮಾತ್ರ ಸ್ಥಿರತೆಯನ್ನು ಕೊಡಬಲ್ಲದು. ಆತ್ಮದ ಕಡೆ ಒಲವು ಹುಟ್ಟಿಸಲು ನಮ್ಮಲ್ಲಿ ಪರ್ವಗಳಿವೆ. ಆದರೆ ನಾವು ಪರ್ವಗಳ ಮೂಲವನ್ನು ಮರೆತ್ತಿದ್ದೇವೆ. ಆದುದರಿಂದಲೇ ಪರ್ವದ ಹೆಸರಿನಲ್ಲಿ ಹಾಸ-ವಿಲಾಸ, ಆಮೋದ-ಪ್ರಮೋದ, ನಮಗೆ ಹೆಚ್ಚಾಗಿ ಕಾಣುತ್ತಿವೆ. ಉಪಾಸನೆ, ಆತ್ಮಶುದ್ಧಿ ಸಾಮಾಯಿಕ, ಸ್ವಾಧ್ಯಾಯ. ದೇವದರ್ಶನ ಮುಂತಾದವುಗಳನ್ನು ಉಪೇಕ್ಷಿಸಿದ್ದಾರೆ. ಪರ್ವದ ಹೆಸರಿನಲ್ಲಿ ಒಳ್ಳೆಯ ಭೋಜನ, ಪರ್ಯಟನೆ ಮತ್ತು ಆರಾಮವಾಗಿ ಬೋಗಿಸುವುದು ಇಂದು ಕಂಡುಬರುತ್ತದೆ. ಇದು ಅಜ್ಞಾನದ ಕುರುಹಾಗಿದೆ.

ಪರ್ವಗಳು ನಮ್ಮ ಸಂಸ್ಕೃತಿಯ ಅಂಗವಾಗಿವೆ. ಪರ್ವಗಳ ರಚನೆಯಿಂದ ನಾವು ಯಾರು ಎಂದು ಗೊತ್ತಾಗುತ್ತದೆ. ನಾವು ''ನಿರ್ವಾಣ—ಮಹೋತ್ಸವ'' ವನ್ನು ಆಚರಿಸುತ್ತೇವೆ. ಇದರ ಹಿನ್ನೆಲೆಯಿಂದ ನಾವು ನಿವೃ-

ತ್ರಿಪಥವ ಮಹಾಪಥಿಕ ತೀರ್ಥಂಕರ ವರ್ಧಮಾನ-ಮಹಾವೀರರ ಮೋಕ್ಷಾಗಮನವನ್ನು ಪ್ರಶಂಸಿಸುತ್ತೇವೆ ಮತ್ತು ವಂದಿಸುತ್ತೇವೆ ಎಂದರ್ಥ ಇದರ ಜೊತೆಗೆ ನಾವು ಆಧ್ಯಾತ್ಮ ಮಾರ್ಗದ ಅನುಯಾಯಿಗಳು. ಎಂಬುವುದು ಇವರಿಂದ ತಿಳಿಯುತ್ತದೆ. ನಮ್ಮ ತೀರ್ಥಂಕರರು ತಿಂಗಳುಗಟ್ಟಲೆ ಉಪವಾಸ ಮಾಡುತ್ತಿದ್ದರು. ಅವರ ಸ್ಮರಣೆ ನಮಗೆ ವ್ರತಗಳಿಂದಾಗುತ್ತದೆ. ನಾವು ಪರ್ವದಿನಗಳಿಂದ ಅದಕ್ಕೆ ಸಂಬಂಧ ಪಟ್ಟ ಉಪಾಸ್ಯ ದೇವತೆಗಳ ಮಹಾನತೆಯನ್ನು ಸ್ಮರಿಸಿ ಕೊಳ್ಳುತ್ತೇವೆ. ಮತ್ತು ತದ್ಗುಣಲಬ್ಧಿಗಾಗಿ ನಮ್ಮನ್ನು ನಾವು ಅರ್ಪಿಸಿಕೊಳ್ಳುತ್ತೆವೆ.

ಮಂದಿರ ಮತ್ತು ಗುರುಗಳ ಸಮೀಪ ವಿನಯವೃತಿಯಿಂದಿರಬೇಕು. ಮನಸ್ಸಿನಲ್ಲಿ ಕೆಟ್ಟ ಮಾತನ್ನು ಯೋಚಿಸಬಾರದು. ಆತ್ಮ ನಿರೀಕ್ಷಣೆಯ ಮುಖಾಂತರ ನಮ್ಮಲ್ಲಿರುವ ದೋಷಗಳನ್ನು ದೂರ ಮಾಡಿ ಕೊಳ್ಳಬೇಕು. ಇದು ಪರ್ವದ ಮುಖ್ಯ ಅಂಗವಾಗ ಬೇಕು. ಜ್ಯೋತಿಷ್ಯದ ಪ್ರಕಾರ ಪರ್ವತಿಥಿಗೆ 'ಪೂರ್ಣಿಮೆ' ಎಂಬ ಅರ್ಥವಿದೆ. ಈ ರಾತ್ರಿಯಲ್ಲಿ ಚಂದ್ರಮಂಡಲ ಪೂರ್ತಿಯಾಗುತ್ತದೆ. ಆಗ ಮಾತ್ರ ಇದು ಪರ್ವವಾಗುತ್ತದೆ. ಮನುಷ್ಯನು ಪರ್ವದಿನದಂದು ಪೂರ್ಣತೆಯ ಕಡೆಗೆ ಹೋಗುವ ಸಂಕಲ್ಪ ಮಾಡಬೇಕು; ಮತ್ತು ತ್ರುಟಿಗಳನ್ನೂ ಅಪೂರ್ಣತೆಗಳನ್ನು ವಿಸರ್ಜಿಸಬೇಕು.

ಓಂ ನಮಃ ಸಿದ್ಧೇಭ್ಯ

## ದಶಲಕ್ಷಣ ಧರ್ಮ

"ಉತ್ತಮಖಮ-ಮದ್ದಉ-ಅಜ್ಜವ ಸಚ್ಚಉ ಪುಣ ಸಉಚ್ಚ-ಸಂಜಮ ಸುತ ಓ ।
ಚಾಉಮಿ ಆಕಿಂಚಣ ಭವಭಯ ವಂಚಣ ಬಂಭ ಚೇರು ಧಮ್ಮಜ ಅ ಖಓ ॥

ಧರ್ಮಕ್ಕೆ ದಶಲಕ್ಷಣಗಳಿವೆ. ಅಥವಾ ಧರ್ಮದ ಸಮಗ್ರ ಸ್ವರೂಪ ದಶಲಕ್ಷಣಾತ್ಮಕವಾಗಿದೆ. ಇವು ಧರ್ಮದ ಅಂಗಗಳಾಗಿವೆ; ಆದುದರಿಂದಲೇ ಇವುಗಳನ್ನು ಉತ್ತಮ ಕ್ಷಮಾ ಧರ್ಮಾಂಗಾಯ, ಉತ್ತಮ ಮಾರ್ದವ ಧರ್ಮಾಂಗಾಯ, ಎಂದು ಕರೆಯುತ್ತಾರೆ. ಈ ಹತ್ತು ಅಂಗಗಳೊಡನೆ 'ಉತ್ತಮ' ಶಬ್ದ ಸೇರಿರುತ್ತದೆ. ಅಂದರೆ ಉತ್ತಮ ಕ್ಷಮಾ, ಉತ್ತಮ ಮಾರ್ದವ, ಉತ್ತಮ ಆರ್ಜವ, ಉತ್ತಮ ಸತ್ಯ, ಉತ್ತಮ ಶೌಚ ಉತ್ತಮ ಸಂಯಮ ತಪ, ಉತ್ತಮ ತ್ಯಾಗ, ಉತ್ತಮ ಆಕಿಂಚನ್ಯ ಮತ್ತು ಉತ್ತಮ ಬ್ರಹ್ಮಚರ್ಯ ಈ ಹತ್ತು ಅನಾದಿ ಕ್ಷರಗಳು ಧರ್ಮ ಲಕ್ಷಣ ಗಳಾಗಿವೆ.

### ಉತ್ತಮ ಕ್ಷಮಾಧರ್ಮ–1

ಉತ್ತಮ ಖಮ ತಿಲ್ಲೋಯಹು ಸಾರಿ ।
ಉತ್ತಮ ಖಮ ಜಂಬುಹಿ ತಾರಿ ॥
ಉತ್ತಮ ಖಮ ರಯಣತ್ತಯ ದಾರಿ ।
ಉತ್ತಮ ಖಮ ದುಗ್ಗಇದುಹ ಹಾರಿ ॥
ಉತ್ತಮ ಖಮ ಗುಣಗಣ ಸಹಯಾರಿ ।
ಉತ್ತಮ ಖಮ ಮುಣಿವಿಂದು ಪಿಯಾರಿ ॥
ಉತ್ತಮ ಖಮ ಬುಹಿಯಣ ಚಿಂತಾಮಣಿ ।
ಉತ್ತಮ ಖಮ ಸಂಪಜ್ಜಯಿ ಥಿರಮಣಿ ॥
ಉತ್ತಮ ಖಮ ಮಹಣಿಜ್ಜ ಸಯಲ ಜಣಿ ।
ಉತ್ತಮ ಖಮ ಮಿಚ್ಛಾತಮ ದಿಣ ಮಣಿ ॥
ಜಹಿ ಅಸಮತ್ಥಹ ದೋಸ ಖಮಿಜ್ಜಯಿೀ ।
ಜಹಿ ಅಸಮತ್ಥಹ ಣವಿ ರುಸಿಜ್ಜಯಿೀ ॥

ಉತ್ತಮ ಕ್ಷಮೆ ತ್ರಿಲೋಕದಲ್ಲೂ ಸರ್ವಶ್ರೇಷ್ಠವಾಗಿದೆ. ಉತ್ತಮ ಕ್ಷಮೆ ಜನ್ಮಸಾಗರವನ್ನು ಪಾರು ಮಾಡಿಸುತ್ತದೆ. ಉತ್ತಮ ಕ್ಷಮೆಯಲ್ಲಿ ರತ್ನತ್ರಯಗಳು ನೆಲೆಗೊಂಡಿವೆ. ಇದು ತ್ರಿರತ್ನಗಳನ್ನು ಧರಿಸಿದೆ. ಉತ್ತಮ ಕ್ಷಮೆ ದುಃಖ ಮತ್ತು ದುರ್ಗತಿಯನ್ನು ದೂರ ಮಾಡುತ್ತದೆ. ಇದು ಅನೇಕ ಗುಣ ಸಮೂಹಗಳ ಸಹ ಚಾರಿಣಿಯಾಗಿದೆ. ಉತ್ತಮ ಕ್ಷಮೆ ಮುನಿಗಳಿಗೆ ತುಂಭಾ ಪ್ರಿಯವಾದದ್ದು. ವಿದ್ವಾಂಸರಿಗೆ ಚಿಂತಾಮಣಿಯ ಹಾಗಿರುವುದು.

ಉತ್ತಮ ಕ್ಷಮೆ ವ್ಯಾಕುಲತೆಯನ್ನ ನಾಶ ಮಾಡುತ್ತದೆ. ಮನಸ್ಸನ್ನು ಸ್ಥಿರ ವಾಗಿಡುತ್ತದೆ. ಉತ್ತಮ ಕ್ಷಮೆ ವಿಶ್ವದಲ್ಲಿ ಮಹಾನತೆಯನ್ನು ಪಡೆದು ಕೊಂಡಿದೆ. ಇದು ಎಲ್ಲರಿಂದಲೂ ಗೌರವ ಪಡೆದುಕೊಂಡಿದೆ. ಇದು ಮಿಥ್ಯಾತತ್ವವೆಂಬ ಅ ಂ ಧ ಕಾ ರ ವ ನ್ನು ನಾಶಮಾಡುವುದರಲ್ಲಿ ದಿನಮಣಿ (ಸೂರ್ಯ)ಯಾಗಿದೆ. ಎಲ್ಲಿ ಅಸಮರ್ಥ ವ್ಯಕಿಯ ದೋಷಗಳ ಕ್ಷಮಾಪಣೆ ನಡೆಯುತ್ತದೋ ಮತ್ತು ಅಸಮರ್ಥರ ಮೇಲೆ ಕೋಪ ಮಾಡುವುದಿಲ್ಲವೋ ಅಲ್ಲಿ ಉತ್ತಮ ಕ್ಷಮೆ ನಿವಾಸಮಾಡುತ್ತದೆ.

ಜಹಿ ಆಕೋಸಣ ವಯಣ ಸಹಿಜ್ಜಯಿ ।
ಜಹಿ ಪರವ ಸೋಣ ಅಣಿ ಭಾಸಿಜ್ಜಯಿ ॥
ಜಹಿ ಚೇಯಣಗುಣ ಚಿತ್ರ ಧರಿಜ್ಜಯಿ ।
ತಹಿ ಉತ್ತದು ಖಮ ಜಿಣೇಣ ಕಹಿಜ್ಜಯಿ ॥

ಇಯ ಉತ್ತಮ ಖಮ ಜುಯಣರ ಸುರಖಗಣುಯ ಕೇವಲಣಾಣ ಲಹೆ ವಿಥಿರು ।
ಹುಯ ಸಿದ್ಧ ಣಿರಂಜಣು ಭವದುಹಭಂಜಣು ಅಗಣಿಯ ರಿಸಿಪುಂಗ ಮಜಿಚಿರು ॥

ಆಕ್ರೋಶ ವಚನಗಳನ್ನು ಕೇಳಿ ಸೈರಿಸಿಕೊಳ್ಳುವ ಪವಿತ್ರ ಭಾವಗಳ ಆವಿರ್ಭಾವವಾಗುತ್ತದೆಯೋ, ಪರ ದೋಷಗಳನ್ನು ಕೆಟ್ಟವರಿಗೂ ಗೊತ್ತಾದಾಗಲೂ ಉಪಗೂಹನವಾಗುತ್ತದೆಯೋ, ಮತ್ತು ಚೇತನ-ಆತ್ಮದ ಗುಣಗಳು ಚಿತ್ತದಲ್ಲಿ ವಿರಾಜಮಾನವಾಗಿರುತ್ತವೆಯೋ, ಅಲ್ಲಿ ಉತ್ತಮ ಕ್ಷಮೆಯು ಸ್ಥಿತಿ ಇರುವುದೆಂದು ಶ್ರೀ ಜಿನೇಂದ್ರ ಭಗವಾನರು ತಿಳಿಸಿದ್ದಾರೆ.

**ಫಲಶ್ರುತಿ:—**

ಇಂತಹ ಉತ್ತಮ ಕ್ಷಮೆಉಳ್ಳ ಮನುಷ್ಯನಿಗೆ ದೇವತೆಗಳು ಮತ್ತು ವಿದ್ಯಾಧರರು ನಮಸ್ಕರಿಸುತ್ತಾರೆ. ಇಂತಹವನಿಗೆ ಸ್ಥಿರ ಕೇವಲ ಜ್ಞಾನದ ಪ್ರಾಪ್ತಿಯಾಗತ್ತದೆ, ಮತ್ತು ಇವನು ಭವದುಃಖವನ್ನು ದೂರ ಮಾಡುವಂತಹ ಸಿದ್ಧ ನಿರಂಜನ ಪದವಿಯ ಶಾಶ್ವತ ಅದಿಕಾರಿಯಾಗತ್ತಾನೆ.

## ಉತ್ತಮ ಮಾರ್ದವ ಧರ್ಮ–2

ಮದ್ದವ ಭವಮದ್ದಣು ಮಾಣಣಿಕಂದಣು ನಯುಧಮ್ಮಹು ಮೂಲ ಜಿ ವಿಮಲು ।
ಸವ್ವಹಿ ಹಿಯುಯಾರಹು ಗುಣಗುಣಸಾರಲು ತಿಸಲು ವಡ ಸಂಜಮ ಸಯಲು ॥

ಮದ್ದಉ ಮಾಣ ಕಸಾಯವಿಹಂಡಣು ।
ಮದ್ದಉ ಪಂಚೇದಿಯ ಮಣ ದಂಡಣು ॥
ಮದ್ದಉ ಧಮ್ಮೇ ಕರುಣಾವಲ್ಲೀ ।
ಪಸರಇ ಚಿತ್ತಮಹಿ ಹಿಂಣವಲ್ಲೀ ॥
ಮದ್ದಉ ಜಿಣವರ ಭತ್ತಿ ಪಯಾಸಇ ।
ಮದ್ದಉ ಕುಮಇ ಪಸರು ಣಿಣ್ಣಾಸಇ ॥
ಮದ್ದವೇಣ ಬಹು ವಿಣಯ ಪವಟ್ಟಇ ।
ಮದ್ದವೇಣ ಜಣವಇರುಉ ಹಟ್ಟಇ ॥

ಭವವನ್ನು ವರ್ದಿಸುವ ಶಕ್ತಿ ಉತ್ತಮ ಮಾರ್ದವ ಧರ್ಮದಲ್ಲಿದೆ. ಇದು 'ಮಾನಕಷಾಯ'ಕ್ಕೆ ಪರಾಭವಕಾರಿಯಾಗಿದೆ. ದಯಾ ಧರ್ಮದ ನಿರ್ಮಲ ಮೂಲ ಮಾರ್ದವವಾಗಿದೆ. ಇದು ಗುಣಗಣಿಯಾಗಿದೆ ಮತ್ತು ಎಲ್ಲರಿಗೂ ಹಿತಕಾರಿಯಾಗಿದೆ. ಉತ್ತಮ ಮಾರ್ದವ ಎಲ್ಲಾ ವ್ರತಗಳ ಮತ್ತು ಸಂಯಮದ ಆಧಾರವಾಗಿದೆ.

ಈ ಉತ್ತಮ ಮಾರ್ದವ ಮಾನಕಷಾಯವನ್ನು ಖಂಡಿಸುತ್ತದೆ. ಪಂಚೇಂದ್ರಿಯ ಮತ್ತು ಮನಸ್ಸಿನ ಸ್ವೈರ-ವಿಲಾಸವನ್ನು ದಂಡಿಸುತ್ತದೆ. ಇದು ಚಿತ್ತರೂಪಿ ಭೂಮಿಯ ಮೇಲೆ ಬೆಳೆಯುವ ಧರ್ಮ ರೂಪಿ ಕರಣಾ-ಲತೆ.

ಉತ್ತಮ ಮಾರ್ದವದಿಂದ ಕುಮತಿಯ ಪ್ರಸಾರ ದೂರವಾಗಿ ಜಿನೇಂದ್ರನ ಭಕ್ತಿ ಪ್ರಕಾಶಿತವಾಗುತ್ತದೆ. ಮಾರ್ದವ ಮನುಷ್ಯನನ್ನು ವಿನಯದ ಕಡೆ ಕರೆತರುತ್ತದೆ. ಇದನ್ನು ಪಾಲಿಸುವುದರಿಂದ ವೈರ ಮತ್ತು ವಿರೋಧವನ್ನು ತ್ಯಜಿಸುವ ಶಕ್ತಿ ಮನುಷ್ಯನಲ್ಲಿ ಬರುತ್ತದೆ.

ಮದ್ಧವೇಣ ಪರಿಣಾದು ವಿಸುದ್ಧೀ।
ಮದ್ದವೇಣ ವಿಉ ಲೋಯಹು ಸಿದ್ಧೀ ॥
ಮದ ಉ ಜಿಣಸಾಸಣ ಜಾಣಿಜ್ಜಯೀ ।
ಅಪ್ಪಾಪರೆ ಸರುವ ಭಾಸಿಜ್ಜಯೀ ॥

ಸಮ್ಮದ್ದಂಸಣ ಅಂಗು ಮದ್ಧಉ ಪರಿಣಾಮು ಜಿ ಮುಣಹು ।
ಇಯ ಪರಿಣಯಾಣ ವಿಚಿತ್ತ ಮದ್ದಉ ಧರ್ಮು ಅಮಲ ಥುಣಹು ॥

**ಫಲಶ್ರುತಿ:—**

ಉತ್ತಮ ಮಾರ್ದವ ಧರ್ಮದ ಪರಿಣಾಮವಾಗಿ ವಿಶುದ್ಧಿಯ ಪ್ರಾಪ್ತಿಯಾಗುತ್ತದೆ. ಉತ್ತಮ ಮಾರ್ದವ ಎರಡೂ ಲೋಕದಲ್ಲಿ ಸಿದ್ಧಿಯನ್ನು ಕೊಡುತ್ತದೆ. ಇದರ ಪಾಲನೆಯಿಂದ ಜಿನ ಶಾಸನದ ಪರಿಜ್ಞಾನವಾಗುತ್ತದೆ; ಆತ್ಮಸ್ವರೂಪ ಮತ್ತು ಪರದ್ರವ್ಯ ಸ್ವರೂಪದ ಭಾಸವಾಗುತ್ತದೆ.

ಉತ್ತಮಮಾರ್ದವ ಧರ್ಮ ಆತ್ಮದ ಪರಿಣಾಮವಾಗಿದೆ. ಇದು ಸಮ್ಯಗ್ದರ್ಶನದ ಅಂಗವಾಗಿದೆ. ಇದನ್ನು ಅರಿತು ಆತ್ಮದಲ್ಲಿ ಧರಿಸಬೇಕು.

## ಉತ್ತಮ ಆರ್ಜವ ಧರ್ಮ—3

"ಧಮ್ಮಹು ವರಲಕ್ಖಣು ಅಜ್ಜವ ಥಿರಮಣು ದುರಿಯ ವಿಹಂಡಣು ಸುಹ ಜಣಣು ।
ತಂ ಇತ್ಥಜಿಕಿಜ್ಜಇ ತಂ ಪಾಲಿಜ್ಜಇ ತಂ ಣಿಸುಣಿಜ್ಜಯಿ ಖಯಜಣಣು ॥"

ಜಾರಿಸು ಣಿಯ ಚಿತ್ತಹಿ ಚಿಂತಿಜ್ಜಯಿ ।
ತಾರಿಸಾ ಅಣಹಂ ಪುಣ ಭಾಸಿಜ್ಜಯಿ ॥
ಕಿಜ್ಜಯಿ ಪುಣ ತಾರಿಸು ಸುಹಸಂಚಣು ।
ತಂ ಅಜ್ಜಉ ಗುಣ ಮುಣಹು ಅವಂಚಣು ॥

ಪುಟ ೧೯

ಮಾಯಾಸಲ್ಲ ಮಣಹು ಣಿಸ್ಸಾ-ದು ।
ಅಜ್ಜವ ಧಮ್ಮ ಪವಿತ್ತ ವಿಯಾ-ದು ॥
ವಉ-ತಉ ಮಾಯಾವಿಷುದು ಣಿರತ್ಥ ಉ ।
ಅಜ್ಜವ ಸಿವಪುರ ಪಂಥಹು ಸತ್ಥದು ॥

ಉತ್ತಮ ಆರ್ಜವ; ಧರ್ಮದ ಶ್ರೇಷ್ಠ ಲಕ್ಷಣವಾಗಿದೆ. ಇದು ಮನ ಸ್ಥೈರ್ಯವನ್ನು ಕೊಡುತ್ತದೆ. ದುಃಖವನ್ನು ಖಂಡಿಸಿ ಸುಖವನ್ನು ದಯ-ಪಾಲಿಸುತ್ತದೆ. ಇದರ ಪಾಲನೆ ಮಾಡಿ. ಇದು ಜನ್ಮವನ್ನು ಕೊನೆಗಾ-ಣಿಸುತ್ತದೆ.

ಈ ಉತ್ತಮ ಆರ್ಜವ ಧರ್ಮವನ್ನು ಕೇಳುವುದರಿಂದ ಚಿತ್ತದಲ್ಲಿ ಆತ್ಮ ಚಿಂತನದ ಭಾವ ಹುಟ್ಟುತ್ತದೆ. ಮತ್ತು ಪುಣ್ಯ ಪರಿಣಾಮದ ಪ್ರಾಪ್ತಿಯಾ-ಗುತ್ತದೆ. ಆರ್ಜವದಿಂದ ಸುಖದ ಸಂಚಯವಾಗುತ್ತದೆ. ಇದು ಗುಣಗಳ-ನ್ನು ಹುಟ್ಟಿಸುತ್ತದೆ. ಮನಸ್ಸಿನಲ್ಲಿರುವ ಮಾಯೆಯನ್ನು ದೂರ ಮಾಡಿ ಇದು ಪವಿತ್ರ ವಿಚಾರಗಳನ್ನು ತುಂಬುತ್ತದೆ. ಮಾಯೆಯ ಬಂಧನದಲ್ಲಿರುವವನ ಪವಿತ್ರ ವ್ರತ ಮತ್ತು ತಪಸ್ಸು ಸಹ ನಿರರ್ಥಕವಾಗುತ್ತದೆ. ಉತ್ತಮ ಆರ್ಜವ ಮಂಗಳಲೋಕದ ದಾರಿಯಾಗಿದೆ.

ಜತ್ಥ ಕುಟಿಲ ಪರಿಣಾಮ ಚಇಜ್ಜಇ ।
ತಹಿ ಅಜ್ಜವ ಧಮ್ಮುಜಿ ಸಂಪಜ್ಜಇ ॥
ದಂಸಣ-ಣಾಣ ಸರೂವ ಅಖಂಡಉ ।
ಪರಮ ಅತೀಂದಿಯ ಸುಕ್ಖ ಕರಂಡಉ ॥
ಅಪ್ಪೆ ಅಪ್ಪಹು ಭವಹು ತರಂಡಉ ।
ಎರಿಸ ಚೇಯಣ ಭಾವ ಪಯಂಡಉ ॥
ಸೋ ಪುಣ ಅಜ್ಜವ ಧರ್ಮಹಿ ಲಬ್ಭಇ ।
ಅಜ್ಜವೇಣ ವಯರಿಉ ಮಣ ಖುಬ್ಭಇ ॥

ಕುಟಿಲ ಪರಿಣಾಮಗಳನ್ನು ದೂರ ಮಾಡುವ ಶಕ್ತಿ ಆರ್ಜವ ಧರ್ಮ-ದಲ್ಲಿದೆ. ಇದು ದರ್ಶನ ಜ್ಞಾನದ ಅಖಂಡ ಸ್ವರೂಪವಾಗಿದೆ. ಇದು ಪರಮ ಅತೀಂದ್ರಿಯ (ಇಂದ್ರಿಯ ಪರೋಕ್ಷ) ಸುಖದ ಕರಂಡಕವಾಗಿದೆ. ಭವ ಸಾಗ

ರವನ್ನು ಪಾರು ಮಾಡಲು ಇದು ಸ್ವತಃ ಪಡಗಾಗುತ್ತದೆ. ಈ ಭವ್ಯ ಆರ್ಜವಧರ್ಮದಿಂದ ವೈರಿಗಳ ಹೃದಯ ಪ್ರವೇಶ ಮಾಡಬಹುದು.

## ಉತ್ತಮ ಸತ್ಯ ಧರ್ಮ_4

"ದಯಧಮ್ಮಹ ಕಾರಣ, ದೋಸನಿವಾರಣ, ಇಹಭವ ಪರಭವ ಸುಕ್ಖಯರು ॥
ಸುಚ್ಚುಜಿ ವಯಣುಲ್ಲಲು ಅತುಲ್ಲ ಉಪೋಲಿಜ್ಜಇ ವಿಸವಾಸಧರು ॥"

ಸಚ್ಚುಜಿ ಸವ್ವಹ ದಮ್ಮಹ ಪಹಾಣು ।
ಸಚ್ಚುಜಿ ಮಹಿಯಲ ಗರಪೌಣಿವಾಣು ॥
ಸಚ್ಚುಜಿ ಸಂಸಾರ ಸಮುದ್ದ ಸೇಉ ।
ಸಚ್ಚುಜಿ ಸವ್ವಹ ಮಣ ಸುಕ್ಖ ಹೆಉ ॥
ಸಚ್ಚೇಣ ಜಿಸೋಹಇ ಮಣುವಜಮ್ಮ ।
ಸಚ್ಚೇಣ ಪವಿತ್ತಉ ಪುಣ್ಣ ಕಮ್ಮ ॥
ಸಚ್ಚೇಣೆ ಸಯಲ ಗುಣಗಣೆ ಮಹಂತಿ ।
ಸಚ್ಚೇಣೆ ತಿಯಸ ಸೇವಾ ವಹಂತಿ ॥

ಉತ್ತಮ ಸತ್ಯ ಅಹಿಂಸೆಯುಳ್ಳ ಧರ್ಮಕ್ಕೆ ಬುನಾದಿಯಾಗಿದೆ. ಇದು ದೋಷಗಳ ನಿವಾರಣೆ ಮಾಡುತ್ತದೆ. ಇದು ಈ ಲೋಕ ಮತ್ತು ಪರಲೋಕ ಎರಡರಲ್ಲೂ ಸುಖ ಕೊಡುತ್ತದೆ. ಇದು ಸತ್ಯ ವಾಣಿಯ ಶ್ರೇಷ್ಠತೆಯಾಗಿದೆ. ಇದು ಲೋಕದಲ್ಲಿ ಅತುಲ್ಯ ಧರ್ಮವಾಗಿ ವಿಶ್ವಾಸದ ಮನೆ ಮಾಡಿ ಕೊಂಡಿರುತ್ತದೆ. ಸತ್ಯ ನುಡಿಯುವವನು ಎಲ್ಲರ ವಿಶ್ವಾಸಗಳಿಸುತ್ತಾನೆ. ಆದೇ ಅಸತ್ಯದ ವ್ಯಕ್ತಿ ಇದ್ದ ವಿಶ್ವಾಸವನ್ನು ಕಳೆದು ಕೊಳ್ಳುತ್ತಾನೆ.

ಇದು ಎಲ್ಲಾ ಧರ್ಮಗಳಲ್ಲಿ ಪ್ರಧಾನ ಧರ್ಮವಾಗಿದೆ. ಭೂಮಿಯ ಮೇಲೆ ಹೆಚ್ಚು ಗೌರವವಿರುವ ವಸ್ತುವೆಂದರೆ ಸತ್ಯವೇ! ಇದು ಈ ಸಂಸಾರ-ಸಾಗರದ ಸೇತುವೆಯಾಗಿದೆ. ಸತ್ಯ ಎಲ್ಲರ ಮನಸ್ಸನ್ನು ಸುಖವಾಗಿಡುತ್ತದೆ. ಮನುಷ್ಯ ಜನ್ಮ ಸತ್ಯದ ಕಾಂತಿಯಿಂದ ಶೋಭಿಸುತ್ತದೆ. ಯಾವುದೇ ಪುಣ್ಯ-ಕರ್ಮ ಸತ್ಯದ ಆಶ್ರಯದಲ್ಲಿ ನಡೆದರೆ ಅಲ್ಲಿ ಪವಿತ್ರತೆ ಇರುತ್ತದೆ. ಬೇರೆ

ಯಲ್ಲಾ ಗುಣಗಳು ಸತ್ಯದಿಂದಲೇ ಮಹಾನತೆಯನ್ನು ಪಡೆದು ಕೊಂಡಿವೆ. ಸತ್ಯಪ್ರತೀಯ ಸೇ ಯನ್ನು ದೇವತೆಗಳು ಮಾಡುತ್ತಾರೆ.

ಸಚ್ಚೇಣ ಅಣುವ್ವಿಹ ವಂಹವಯಾ ಇ ।
ಸಚ್ಚೇಣ ವಿಣಾಸಿಯ ಆವಯಾ ಇ ॥
ಹಿಯಂಮಿಯ ಭಾಸಿಜ್ಜಇ ಸಚ್ಚ ಭಾಸ ।
ಣವಿ ಭಾಸಿಜ್ಜಇ ಪರದುಹ ಪಯಾಸ ॥
ರುಂಧಿಜ್ಜಇ ಮುಣಿಣಾ ವಯಣಗುತ್ತಿ ।
ಜಂಖಿಯ ಛಿಟ್ಟಇ ಸಂಸಾರ ಅತ್ತಿ ॥

ಉತ್ತಮ ಸತ್ಯದಿಂದ ಅಣುವ್ರತ ಮತ್ತು ಮಹಾವ್ರತಗಳನ್ನು ಪಾಲಿಸಿದಗಾಗುತ್ತದೆ. ಇದರಿಂದ ಆಪತ್ತಿಗಳು ದೂರವಾಗುತ್ತವೆ. ಸತ್ಯವಾದಿ ಹಿತಕಾರಿಯಾಗಿ ಮಿತವಾಗಿ ಮಾತನಾಡುತ್ತಾನೆ. ಅವನು ಬೇರೆಯವರ ಮನಸನ್ನು ತನ್ನ ಮಾತಿನಿಂದ ಮುರಿಯುವುದಿಲ್ಲ.

ಮುನಿವರ್ಯರು ತಮ್ಮ ವಚನ ಗುಪ್ತಿಯನ್ನು ಸತ್ಯದಿಂದಲೇ ಪಾಲಿಸುತ್ತಾರೆ. ಈ ಸತ್ಯಬಲದಿಂದಲೇ ಸಂಸಾರದ ಅರ್ತಿ-ಪೀಡೆಯ ಕ್ಷಯಮಾಡುತ್ತಾರೆ.

"......ಹಿತಂ ಮನೋಹಾರಿ ಚ ದುರ್ಲಭಂ ವಚ ; ॥"

ಸತ್ಯದಿಂದ ಕೂಡಿದ ವಚನ ಹಿತಕಾರಿ ಇಲ್ಲದೆ ಹೋದರೆ ಅದು ನಿಂದನೀಯ. ಆಗ ಅದು ಸತ್ಯವಾದರೂ ಅಸತ್ಯವಾಗಿ ಹೋಗುತ್ತದೆ. ಅಥವಾ ವಚನ ಮಧುರವಾಗಿದ್ದು ಅಸತ್ಯವಾಗಿದ್ದರೆ ಅದು ನಿಂದೆಗೆ ಪಾತ್ರವಾಗುತ್ತದೆ. ವಾಸ್ತವಿಕತೆಯಲ್ಲಿ ಇವೆರಡೂ ಒಂದು ಕಡೆ ದೊರೆಯುವುದಿಲ್ಲ. ಇಂತಹ ಗುಣಗಳಿಂದ ಕೂಡದ ವಚನಗಳು ಪ್ರಶಂಸನೀಯ ಮತ್ತು ಪ್ರಶಸ್ತವಾಗಿರುತ್ತವೆ.

ಸತ್ಯಮಪಿ ವಿಪದೇ.......................

ಉತ್ತಮ ಶೌಚ ಧರ್ಮ–

ಸಲುಚಜಿ ಧರ್ಮಂಗವ ತಂಜಿ ಅಭುಗಲು ಭಿಣ್ಣಂಗವು ಭಿಣ್ಣಗಲೂ ಊವವುಗ್ಗಮಟ ।

ಜರ ಮರಣ ವಿಣಾಸಣ ತಿಜಹುಪಹಾಸಣ ಝಾಇಜ್ಜಇ ಅಹಣಿಸಿ ಜಿ ಧುವೋ ॥

ಧಮ್ಮಸಉಚ್ಚಹೋಯಿ ಮಣ ಸುದ್ಧಇ ।
ಧಮ್ಮಸಉಚ್ಚವಹುಣಘಣ ಗಿದ್ಧಇ ॥
ಧಮ್ಮಸಉಚ್ಚಲೋಹವೇಜಂತ ।
ಧಮ್ಮಸಉಚ್ಚಸುತವಪಹಿ ಜಂತ ॥
ಧಮ್ಮಸಉಚ್ಚವಂಭವಯ ಧಾರಥು ।
ಧಮ್ಮಸಉಚ್ಚಮಹುಟ್ಟ ಣಿವಾರಣು ॥
ಧಮ್ಮಸಉಚ್ಚಜಿಣಾಯಮಭಣಣಿ ।
ಧಮ್ಮಸಉಚ್ಚಸುಗುಣ ಅಣು ಮಣಣಿ ॥

ಧರ್ಮದ ದಶಾಂಗಳಲ್ಲಿ ಉತ್ತಮ ಶೌಚ ಧರ್ಮ ಅಭಂಗವಾಗಿದೆ. ಅಖಂಡವಾಗಿದೆ. ಇದು ಕೇವಲ ಶಾರೀರಿಕ ಶುಚಿಯನ್ನಲ್ಲದೆ, ಆಂತರಿಕ ಶುಚಿಯನ್ನೂ ಇಚ್ಛಿಸುತ್ತದೆ. ಇದು ಅಂತರ್ಬಾಹ್ಯ ಶುಚಿಯ ಉಪಲಕ್ಷಣವಾಗಿದೆ. ಯಾವ ಭವ್ಯಾತ್ಮರು ರಾತ್ರಿ ಹಗಲು ಇದರ ಧ್ಯಾನ ಮಾಡುತ್ತಾರೋ, ಅವರು ಮೃತ್ಯು ಮತ್ತು ರೋಗದಿಂದ ರಹಿತರಾಗಿ ತ್ರಿಲೋಕ ಪೂಜ್ಯರಾಗುತ್ತಾರೆ.

ಶೌಚ ಧರ್ಮದಿಂದ ಮನಃಶುದ್ಧಿಯಾಗುತ್ತದೆ. ಶಾಸ್ತ್ರ ಮತ್ತು ವಚನವೆಂಬ ಉತ್ತಮ ಧನದಿಂದ ಶೌಚಧರ್ಮದ ಪ್ರಾಪ್ತಿಯಾಪುತ್ತದೆ. ಮಾಇ ಲೋಭವನ್ನು ವರ್ಜಿಸುತ್ತದೆ. ಇದು ಭವ್ಯರಿಗೆ ಒಳ್ಳೆಯತಪಸ್ಸಾಗಿದೆ. ಇದರಿಂದ ಬ್ರಹ್ಮಚರ್ಯಧಾರಣೆಯಾಗುತ್ತದೆ. ಇದು ಅಷ್ಟ ವಿಧಮದವನ್ನು ನಿವಾರಿಸುತ್ತದೆ. ಜಿನಾಗಮ ಸ್ವಾಧ್ಯಾಯ ಶೌಚಧರ್ಮವಾಗಿ. ಒಳ್ಳೆಯ ಗುಣಗಳ ಅನುಚಿಂತನೆ ಶೌಚವಾಗಿರುತ್ತದೆ.

## ಉತ್ತಮ ಸಂಯಮ ಧರ್ಮ_6

ಸಂಜಮು ದುಣಿದುಲ್ಲಹು ತಂ ಪಾವಿಲ್ಲಯ ಜೋ ಛಂಡಹಿ ಖಣ ಮಾಣವಾ ಈ ।
ಸೋ ಭಮಣಿ ಭವಾವಲಿ ಜರಮರಣಾವಲಿ ಕಿಮು ಪಾವಿ ಸೋ ಪುಣಸುಗ ಈ ॥

ಸಂಜಮು ಪಂಚೇದಿಯ ದಂಡಣೇಣ ।
ಸಂಜಮುಜಿ ಕಸಾಯ ವಿಹಂಡಣೇಣ

ಸಂಜಮು ದುದ್ಧರ ತವ ಧಾರಣೇಣ ।
ಸಂಯುಮು ರಸಚಾಯ ವಿಯಾರಣೇಣ ॥
ಸಂಯುಮು ಉವವಾಸ ವಿಯರಣೇಣ ।
ಸಂಯುಮು ಮಣ ಪಸರಲು ಥಮ್ಮಣೇಣ ॥
ಸಂಜಮು ಗುರುಕಾಯ ಕಲೇಸಣೇಣ ।
ಸಂಜಮು ಪರಿಗಹ ಗಹಚಾಯಏಣ ॥

ಉತ್ತಮ ಸಂಯುಮ ಧರ್ಮ ಮನುಷ್ಯರಲ್ಲಿ ಅತಿದು ರ್ಲಲವಾದ ವಸ್ತು. ಪುಣ್ಯಫಲದಿಂದ ಯಾರಿಗಾದರೂ ಇದರ ಪ್ರಾಪ್ತಿಯಾಗಿ ಅದನ್ನು ಅವನು ಬಿಟು ಬಿಟ್ಟರೆ ಅವನನ್ನು ಮೂಢಮತಿ ಎಂದು ಕರೆಯುಬೇಕಾಗುತ್ತದೆ. ಇಂತಹ ವ್ಯಕ್ತಿ ಭವಾವಳಿಯಲ್ಲಿ ಪರಿಭ್ರಮಣ ಮಾಡತ್ತಿರುತ್ತಾನೆ. ಅವನು ಜರಾಮರಣವನ್ನು ಪಡೆಯುತ್ತಾನೆ. ಅವನು ಸದ್ಗತಿಯನ್ನಾಗಲೀ ಪುಣ್ಯವನ್ನಾಗಲೀ ಪ್ರಾಪ್ತಿ ಹೊಂದಲು ಸಾಧ್ಯವಿಲ್ಲ.

ಪೆಂಚೇಂದ್ರಿಯಗಳ ದಂಡನೆಯಿಂದ ಉತ್ತಮ ಸಂಯುಮದ ಪರಿಪಾಲನೆಯಾಗುತ್ತದೆ. ಉತ್ತಮ ಸಂಯುಮದ ಪಾಲನೆಯಾಗಬೇಕಾದರೆ, ಕಷಾಯದ ಖಂಡನೆಯಾಗಬೇಕು. ದುರ್ಧರ ತಪವನ್ನು ಆಚರಿಸಬೇಕು. ಷಡ್-ರಸಗಳನ್ನು ತ್ಯಜಿಸಬೇಕು. ಉಪವಾಸವನ್ನು ವೃದ್ಧಿಸಬೇಕು. ಮಾನಸಿಕ ಚಂಚಲತೆಯನ್ನು ನಿಯಂತ್ರಿಸಬೇಕು. ಪರಿಗ್ರಹ ಮತ್ತು ಕಾಯ-ಕ್ಲೇಶವನ್ನು ತ್ಯಜಿಸಬೇಕು.

ಸಂಜಮು ತಸಥಾವರ ರಕ್ಖಣೇಣ ।
ಸಂಜಮು ಸುತ್ತತ್ಥ ಪರಿಕ್ಖಣೇಣ ॥
ಸಂಜಮು ತಣುಜೋಯ ಣಿಯಂತಣೇಣ ॥
ಸಂಜಮು ಬಹುಗಮಣ ಚಯಂತಣೇಣ ।
ಸಂಜಮು ಅಣುಕಂಪ ಕುಣಂತಣೇಣ ॥
ಸಂಜಮು ಪರಮತ್ಥ ವಿಯಾರಣೇಣ ॥
ಸಂಜಮು ಪೋಸಣ ದಂಸಣಹು ಇತ್ಥು ।
ಸಂಜಮು ತಿಸ್ಸಹುಣಿರು ಮೋಕ್ಖಪಂಥು ॥

ತ್ರಸ, ಸ್ಥಾವರ ಜೀವಗಳ ರಕ್ಷಣೆ ಸಂಯಮದಿಂದಾಗುತ್ತದೆ. ಸೂತ್ರ ಮತ್ತು ಶಾಸ್ತ್ರಗಳ ಪರಿಜ್ಞಾನದಿಂದ ಸಂಯಮದ ಪಾಲನೆಯಾಗುತ್ತದೆ. ಯೋಗಗಳ ಚಪಲತೆಯ ನಿಯಂತ್ರಣದಿಂದ ಸಂಯಮ ಬರುತ್ತದೆ. ಅನು–ಕಂಪ ಮತ್ತು ಪರಮಾರ್ಥದ ಚಿಂತನದಲ್ಲಿ ಸಂಯಮ ವಾಸ ಮಾಡುತ್ತದೆ. ಉದ್ದೇಶವಿಲ್ಲದ ಪರ್ಯಟನೆ ನಿಲ್ಲಿಸುವುದರಲ್ಲಿಯು ಸಂಯಮವಿದೆ: ಈ ರೀತಿ ಸಂಯಮ ಸಮ್ಯಗ್ದರ್ಶನವನ್ನು ಬಲಗೊಳಿಸುತ್ತದೆ. ಇದೇ ಮೋಕ್ಷ ಮಾರ್ಗವಾಗಿದೆ.

## ಉತ್ತಮ ತಪೋಧರ್ಮ–7

ಣರ ಭವ ಪಾವೇಪ್ಪಿಣು ತಚ್ಚ ಮುಣಿ ಪ್ಪಿಣು ಖಂಚಿವಿ ಪಂಚೆಂದಿಯ ಸಮಣು ।
ಣಿವ್ವೇವು ಪಮಂಡಿ ವಿಸಂಗಇ ಥಂಡಿ ಎ ತಅ ಕಿಜ್ಜಇ ಜಾಏ ವಿವ್ವಣು ॥

ತಂ ತಉ ಜಹಿ ಪರಿಗಹ ಛಂಡಿಜ್ಜಇ ।
ತಂ ತಉ ಜಹಿ ಮಯಣಾಜಿ ಖಂಡಿಜ್ಜಇ ॥
ತಂ ತಉ ಜಹಿ ಗಿರಿಕಂದರ ಣಿವಸಇ !
ತಂ ತಉ ಜಹಿ ಉವ ಸಗ್ಗ ಸಹಿಉಇ ॥
ತಂ ತಉ ಜಹಿ ರಾಯಾಇ ಜಯಿಣ್ಜ್ಜಇ ।
ತಂ ತಉ ಜಹಿ ಭಿಕ್ಖಇ ಭುಂಜಿಜ್ಜಇ ।
ಸಾವಯಗೇಹ ಕಾಲ ಣಿವಸಜ್ಜಇ ॥

ಉತ್ತಮ ಮನುಷ್ಯನ ಜನ್ಮಪಡೆದು, ಸಪ್ತ ತತ್ವಗಳನ್ನು ಅರಿತು, ಪಂಚೇಂದ್ರಿಯಗಳನ್ನು ಮನುಸ್ಸು ಸಮೇತ ನಿರೋಧಿಸಿ, ವೈರಾಗ್ಯಾವಸ್ಥೆಗೆ ಬಂದಾಗ, ಸಮಸ್ತ ವಿಸಂಗ-ಪರಿಗ್ರಹಗಳ ಪರಿತ್ಯಾಗಮಾಡಿ ವನಾಗಮನ ಮಾಡುವುದಕ್ಕೆ ಮುಂಚಿತವಾಗಿ ತಪ-ಧರ್ಮದ ಪಾಲನೆ ಮಾಡಬೇಕು.

ಪರಿಗ್ರಹದ ತ್ಯಾಗವಾದ ಕಡೆ ಉತ್ತಮ ತಪೋಧರ್ಮವಿರುತ್ತದೆ. ಎಲ್ಲಿ ಕಾಮನ ದರ್ಪ ಮುರಿಯಲ್ಪಟ್ಟಿದೆಯೋ ಮತ್ತು ದಿಗಂಬರ ಮುನಿ ಮಹಾ-ರಾಜರ ದರ್ಶನ ವಾಗುತ್ತದೋ ಅಲ್ಲಿ ತಪೋಧರ್ಮ ನೆಲಸುತ್ತದೆ. ಇದು ಗಿರಿ-ಕಂದರಗಳಲ್ಲಿ ವಾಸ ಮಾಡಲು ಹೇಳುತ್ತದೆ. ಉಪಸರ್ಗಗಳನ್ನು ಸಹಿ–

ಸುವ ಕ್ಷಮತೆ ಇದರಲ್ಲಿದೆ. ಇದು ರಾಗಾದಿಗಳನ್ನು ಗೆದ್ದಿದೆ. ಇದರಲ್ಲಿ ಭಿಕ್ಷೆ ಮಾಡಿ ಭೊಜನ ಮಾಡಬೇಕು. ಪವಿತ್ರರಾದ ಭಕ್ತಿಉಳ್ಳ ಶ್ರಾವಕರ ಮನೆಯಲ್ಲಿ ನಿಶ್ಚಿತ ಸಮಯದಲ್ಲಿ ಆಹಾರಗ್ರಹಿಸಬೇಕು.

ತಂ ತವು ಜತ್ಥ ಸಮಿದಿ ಪರಿಪಾಲಣು ।
ತಂ ತವು ಗುತ್ತಿತ್ತಯಹಿ ಣಿಹಾಲಣು ॥
ತಂ ತವು ಜಹಿ ಅಪ್ಪಾಪರ ಬುಜ್ಝಇ ।
ತಂ ತವು ಜಹಿ ಸಸರೂಪ ಮುಣಿಜ್ಜಇ ॥
ತಂ ತವು ಜಹಿ ಕಮ್ಮಗ್ಗಣ ಖಿಜ್ಜಇ ॥
ತಂ ತವು ಜಹಿ ಸುರಭತ್ತಿ ಪಯಾಸಇ ।
ಪವಯಣತ್ಥ ಭವಿಯಣಹ ಪಭಾಸಇ ॥
ಜೇಣ ತವೇ ಕೇವಲ ವುಪ್ಪಜ್ಜಇ ।
ಸಾಸಯ ಸುಕ್ಖ ಣಿಚ್ಚ ಸಂಪಜ್ಜಇ ॥

ತಪ ಯತಿಗಳ ಪಾಲನೆಯಾಗಿದೆ. ತಪ ಗುಪ್ತಿತ್ರಯವನ್ನು ನೋಡಿಕೊಳ್ಳುತ್ತದೆ. ಎಲ್ಲಿ ಆತ್ಮ ಮತ್ತು ಪರದ್ರವ್ಯದ ಬೋಧೆ ನಡೆಯುತ್ತದೆಯೋ ಅಲ್ಲಿ ತಪವಿರುತ್ತದೆ. ತಪವಿದ್ದಲ್ಲಿ ಈ ಭವದ ನಾಶವಾಗಿ ಜನ್ಮ ಮರಣದಿಂದ ಮುಕ್ತಿ ದೊರಕುತ್ತದೆ. ಕರ್ಮಕ್ಷಯ ಮತ್ತು ಸ್ವಸರೂಪದ ಪರಿಜ್ಞಾನ 'ತಪ'ವಾಗಿದೆ. ದೇವದೇವನ ಪ್ರತಿ ಭಕ್ತಿ ಭಾವದ ಸದ್ಭಾವನೆ ತಪ-ಧರ್ಮವಾಗಿದೆ. ಪ್ರವಚನದ ಅರ್ಥ ಮತ್ತು ತತ್ವ ಪ್ರಕಟನೆಯಿಂದರೆ ಭವ್ಯಜನರಿಗೆ ತಪ-ಧರ್ಮ ದೊರೆಕಿದೆ ಎಂದು ಸೂಚನೆ.

ತಪದಿಂದ ಕೇವಲ ಜ್ಞಾನದ ಉತ್ಪತ್ತಿಯಾಗುತ್ತದೆ. ಮತ್ತು ಶಾಶ್ವತ ಸುಖ ನಿತ್ಯ ದೊರಕುತ್ತದೆ. ಇಂತಹ ವಿಲಕ್ಷಣ ಮಹಿಮೆ ತಪ ಧರ್ಮದ್ದಾಗಿದೆ.

## ಉತ್ತಮ ತ್ಯಾಗ ಧರ್ಮ-8

ಚಾವು ವಿ ಧಮ್ಮಂಗವು ತಂ ಜಿ ಅಭಂಗವು ಣಿಯಸತ್ತಿಯ ಭತ್ತಿಯ ಜಿಣಹು ।
ಪತ್ತಹಂ ಸುಗವಿತ್ತಹು ತವಗುಣು ಜಿತ್ತಹಂ ಪರಗಇ ಸಂಪ್ರಲು ತಂ ಮುಣ ಹು ॥

ಚಾಎ ಅವಪುಣಗಣ ಜಿ ಪ್ಪಹುಟ್ಟಇ ।

ಚಾಇ ಣಿಮ್ಮಲ ಕಿತ್ತಿ ಪವಟ್ಟ್ಇ ॥
ಅಭಯದಾಣು ದಿಜ್ಜಇ ಪಹಿಲಾರಹು ।
ಜಿಮಶಾಸಇ ಪರಭವ ದುಹ ಪಾರವು ॥
ಸತ್ಥದಾಣು ಬೀಜವು ಪುಣ ಕಿಜ್ಜಯಿ ।
ಣಿಮ್ಮಲ ಣಾಣ ಜೇಣ ಪವಜ್ಜಯಿ ॥
ಓಸಹ ದಿಜ್ಜಇ ರೋಯ ವಿಣಾಸಣು ।
ಕಹವಿಣಚ್ಚಇ ವಾಹಿಪಯಾಸಣು ॥
ಆಹಾರೇ ಧಣರಿದ್ಧಿ ಪವಟ್ಟಇ ।
ಚವುವಿವು ಚಾವು ಜಿವಿವು ಪವಟ್ಟಇ ॥

ಉತ್ತಮ ತ್ಯಾಗ–ಧರ್ಮದ–ಅವಿಭಾಜ್ಯಾಂಗವಾಗಿದೆ. ತಮ್ಮ ತಮ್ಮ ಶಕ್ತಿಯ ಅನುಸಾರ ಭಕ್ತಿಯಿಂದ ತ್ಯಾಗ ಮಾಡುವುದು ತುಂಬಾ ಶ್ರೇಯಸ್ಕರ. **'ಶಕ್ತಿ ತಸ್ತ್ಯಾಗ ತಪಸಿ'** - ಈ ತ್ಯಾಗ ಪಾತ್ರನಿಗೆ, ಪಾವಿತ್ರ್ಯ ಮತ್ತು ತಪೋ-ಗುಣದಿಂದ ಕೊಡಿದವನಿಗೆ ಮಾಡಬೇಕು. ಇದನ್ನು ಪರಲೋಕದ ಬುತ್ತಿ ಎಂದು ತಿಳಿದು ಕೊಳ್ಳಬೇಕು.

ತ್ಯಾಗದಿಂದ ಅವಗುಣಗಳ ಸಮೂಹ ಪರಾಜಿತವಾಗುತ್ತದೆ. ನಿರ್ಮಲ ಕೀರ್ತಿಯ ವೃದ್ಧಿಯಾಗುತ್ತದೆ. ಪ್ರಥಮ ತ್ಯಾಗ (ದಾನ) ಅಭಯದಾನ ವಾಗಿದೆ. ಇದರಿಂದ ಪರಭವದಲ್ಲಾಗುವ ದುಃಖಗಳು ವಿನಾಶವಾಗುತ್ತವೆ. ದ್ವಿತೀಯ ದಾನ ಶಾಸ್ತ್ರದಾನವಾಗಿದೆ. ಈ ದಾನ ದಿಂದ ನಿರ್ಮಲ ಜ್ಞಾನದ ಪ್ರಾಪ್ತಿಯಾಗುತ್ತದೆ. ಮೂರನೆಯ ದಾನ ಔಷಧಿ ದಾನವಾಗಿದೆ. ಇದರಿಂದ ಪ್ರಾಣಿಗಳಿಗೆ ರೋಗದಿಂದ ಮುಕ್ತಿ ದೊರಕುತ್ತದೆ. ವ್ಯಾಧಿಗಳು ದೂರವಾ-ಗುತ್ತವೆ. ಆಹಾರದಾನದಿಂದ ಧನ-ವೃದ್ಧಿಯಾಗುತ್ತದೆ. ಭವ್ಯರು ಮೇಲ್ಕಂಡ ನಾಲ್ಕು ದಾನಗಳನ್ನು ಮಾಡುತ್ತಿರಬೇಕು.

## ಉತ್ತಮ ಆಕಿಂಚನ್ಯ ಧರ್ಮ_9

ಆಕಿಂಚಣು ಭಾವ ಹು ಅಪ್ಪವು ಝಾವಹು ದೇಹವು ಣಾಣಾವುಹ ।
ಣಿರುವಮಗಯ ವಣ್ಣವು ಸುಹಸಿಂಪಣ್ಣವು ಪರಮ ಅತೀಂದ್ರಿಯ ವಿಗುಪುಭಕ್ತಿ

ಆಕಿಂಚಣು ವಹು ಸಂಗಹ ಣಿವಿತ್ತಿ ।
ಆಕಿಂಚಣು ವಹು ಸುಹಜ್ಝಾಣ ಸತ್ತಿ ॥
ಆಕಿಂಚಣು ವಹು ವಿಯಲಿಯ ಮಮತ್ತಿ ।
ಆಕಿಂಚಣು ರಯಣತ್ತಯ ಪವಿತ್ತಿ ॥
ತಿಣಿಮಿತ್ತ ಪರಿಗ್ಗಹ ಜತ್ಥಣತ್ಥಿ ।
ಆಕಿಂಚಿಣು ಸೋ ಣಿಯಮೇಣ ಅತ್ಥಿ ॥
ಅಪ್ಪಾಪರ ಜತ್ಥ ವಿಯಾರ ಸತ್ತಿ ।
ಪಯಡಿಜ್ಜಇ ಜಹಿ ಪರಮಟ್ಠಿ ಭತ್ತಿ ॥
ಜಹಿ ಛಂಡಿಜ್ಜಇ ಸಂಕಪ್ಪ ದುಟ್ಟ ।
ಭೋಯಣಿ ವಂಛಿಜ್ಜಇ ಜಹಿ ಆಣಿಟ್ಠ ॥

ಆತ್ಮ ಧ್ಯಾನವೇ ಉತ್ತಮ ಆಕಿಂಚನ್ಯ ಧರ್ಮ. ಈ ಆತ್ಮಧ್ಯಾನ ದೇಹದಿಂದ ಭಿನ್ನವಾಗಿದೆ, ಜ್ಞಾನಮಯವಾಗಿದೆ. ಈ ಆತ್ಮ ನಿರುಪಮ, ಗಂಧ ವರ್ಣ ರಹಿತವಾಗಿದೆ. ಸುಖದಿಂದ ಕೂಡಿದೆ. ಇದು ಇಂದ್ರಿಯಗಳಿಗೆ ಗೋಚರಿಸದೆ ಭವ ಮುಕ್ತವಾಗಿದೆ.

ಆಕಿಂಚನ್ಯ ಧರ್ಮ ಸಂಗ್ರಹ ನಿವರ್ತಕವಾಗಿದೆ. ಶುದ್ಧ ಧ್ಯಾನದ ಶಕ್ತಿಯಾಗಿದೆ. ಮಮತ್ವದಿಂದ ದೂರವಾಗುವುದು ಆಕಿಂಚನ್ಯವೇ ಆಗಿದೆ. ಇದು ರತ್ನತ್ರಯ ಪ್ರವೃತ್ತಿಯಾಗಿದೆ. ಇದರಲ್ಲಿ ತೃಣ ಮಾತ್ರವೂ ಪರಿಗ್ರಹವಿಲ್ಲ. ಆಕಿಂಚನ್ಯ 'ಆತ್ಮ' ಮತ್ತು 'ಪರ'ದ ವಿಚಾರ ಶಕ್ತಿಯಾಗಿದೆ. ಇದರಲ್ಲಿ ಪರಮೇಷ್ಠಿ ಭಕ್ತಿ ಪ್ರಕಟವಾಗುತ್ತದೆ. ದುಷ್ಟ ಸಂಕಲ್ಪಗಳನ್ನು ತ್ಯಜಿಸಿದಾಗ ಮಾತ್ರ ಆಕಿಂಚನ್ಯ ಬರುತ್ತದೆ. ಅನುದ್ದಿಷ್ಟ ಭೋಜನ ಆಕಿಂಚನ್ಯ ಧರ್ಮವಾಗಿದೆ.

## ಉತ್ತಮ ಬ್ರಹ್ಮಚರ್ಯ ಧರ್ಮ – 10

"ವಂಬವ್ವಉ ದುದ್ಧರು ಧಾರಿಜ್ಜಇ ವರು ಫೆಡಿಜ್ಜಯಿ ವಿಸಯಾಸಣಿರಂ ।
ತಿಯ ಸುಕ್ಖಣ ರತ್ತಉ ಮಣಕರಿ ಮತ್ತಉತಂ ಜಿ ಭವ್ವ ರಕ್ಷವ್ವ ಥಿರು ॥"

ಚಿತ್ತ ಭೂಮಿ ಮಯಣುಜಿ ಉಪ್ಪಜ್ಜಇ ।

ತೇಣ ಜೇ ಪೀಡಣಿ ಕರಣಿ ಅಕಜ್ಜುಣಿ ॥
ತಿಯಹ ಸರೀರಣಿ ಣಿದಿಯ ಸೇವಣಿ ।
ಣಿಯ ಪರಣಾರಿಣ ಮೂಢ ಉವೇಯಣಿ ॥
ಣಿವಡಯಿ ಣರಣಿ ಮಹಾದುಹ ಭುಜಣಿ ।
ಜೋ ಹೀಣುಜಿ ವಂಭವ್ವಉ ಭಂಜಣಿ ॥
ಇಣ ಜಾಣೆಪ್ಪಿಣು ಮಣವಯ ಕಾಯೆ ।
ವಂಭಚೇರು ಪಾಲಹು ಅಣು ರಾಯೇ ॥
ತೇಣ ಸಹುಜಿ ಉಬ್ಬಣಿ ಭವಪಾರಉ ।
ವಂಭಂ ವಿಣವಉ ತಉಜಿ ಅಸಾರಉ ॥

ಹೇ ಭವ್ಯಾತ್ಮನೇ ! ದುರ್ಧರವಾದ ಮತ್ತು ಶ್ರೇಷ್ಠವಾದ ಬ್ರಹ್ಮಚರ್ಯ ವನ್ನು ಧರಿಸು. ವಿಷಯ-ಸುಖಗಳ ಆಸೆಯನ್ನು ತ್ಯಜಿಸು. ಈ ಮನಸ್ಸು ಆನೆಯ ಹಾಗೆ ಉನ್ಮತ್ತಗೊಂಡು ಸ್ತ್ರೀ ಸುಖದಲ್ಲಿ ಲೀನವಾಗಲು ಇಚ್ಛಿಸು- ತ್ತದೆ. ಸಂಯಮವೆಂಬ ಅಂಕುಶದಿಂದ ಹೊಡೆದು ಇದನ್ನು ವಶದಲ್ಲಿಡಿ.

ಚಿತ್ತದಲ್ಲಿ ಈ ಕಾಮ ವಿಕಾರ ಹುಟ್ಟುತ್ತದೆ. ಇದು ಮನುಷ್ಯನನ್ನು ಪೀಡಿಸಿ ಕೆಟ್ಟ ಮಾರ್ಗದಲ್ಲಿ ಎಳೆಯುತ್ತದೆ. ಇದು ನಿಂದನೀಯವಾದ ನಾರಿ ದೇಹದ ದಾಸ. ಬ್ರಹ್ಮಚರ್ಯದ ಲೋಪವಾದವನ್ನು ನರಕಗತಿಯನ್ನು ಹೊಂದಿ ದುಃಖ ಪಡುತ್ತಾನೆ. ಈ ರೀತಿ ಯೋಚಿಸಿ ಮನ, ವಚನ, ಕಾಯದಿಂದ ಬ್ರಹ್ಮಚರ್ಯವನ್ನು ಪಾಲಿಸಬೇಕು. ಇದು ಭವ ಸಾಗರವನ್ನು ಪಾರು ಮಾಡಿಸುತ್ತದೆ. ಅಸಾರವನ್ನು ತ್ಯಜಿಸಿ ಸಾರರೂಪವಾದ ‘‘ಬ್ರಹ್ಮ’’ವನ್ನು ಗ್ರಹಿಸುವುದು ಶ್ರೇಯಸ್ಕರ ಬ್ರಹ್ಮಚರ್ಯವಿಲ್ಲದ ವ್ರತ ಮತ್ತು ತಪ ಅಸಾರ ವಾಗಿರುತ್ತದೆ.

“ಇನು ರಇಧೂ ಚಹು ಮಣಿ ವಿಣುಇರು”—ಕವಿ ರಇಧೂ ಈ ದಶ ಲಕ್ಷಣಗಳನ್ನು ಐರೆದಿದ್ದಾನೆ.

(ಈ ಪ್ರತಿ ಸುವರ್ಣಾಕ್ಷರಗಳಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಇಪ್ಪತ್ತಾರು ಪತ್ರಗಳಿವೆ. ಆಶ್ವಿನ್ ಕೃಷ್ಣ ಅಮಾವಾಸ್ಯ ಸಂವತ್ 1966ರಲ್ಲಿ ಬರೆದಿರುವುದು. ಗ್ರಂಥ ಸಂಖ್ಯೆ 54 (ಕ) ಶ್ರೀನಯಾ ಮಂದಿರ್‌ಜೀ, ಜೈನ ಸರಸ್ವತಿ ಭಂಡಾರ, ಧರ್ಮಪುರ ದಿಲ್ಲಿ (29-6-71)